# ಲೋಹ ವರಾಹ

ಡೆನ್ಮಾರ್ಕ್ ದೇಶದ

## ಹ್ಯಾನ್ಸ್ ಕ್ರಿಶ್ಚಿಯನ್ ಆ್ಯಂಡರ್ಸನ್

ಎಂಬ ಕವಿಯ ಹದಿಮೂರು ಕಥೆಗಳು



**ಜಿ. ಪಿ. ರಾಜರತ್ನಂ**



**ಸತ್ಯಶೋಧನ ಪ್ರಕಟನಮಂದಿರ**

೧೯೪೭] ಕೋಟೆ, ಬೆಂಗಳೂರು [ರೂ. ಒಂದು.

## ಜಿ. ಪಿ. ರಾಜರತ್ನಂ ಬರೆದ ಹೊಸ ಪುಸ್ತಕಗಳು

(ಇವು ಅಚ್ಚಾಗಿವೆ)

ಗೌತಮ ಬುದ್ಧ
ತೆನಾಲಿ ರಾಮ
ಪಂಡಿತನ ನೆರಳು
ಮಕ್ಕಳ ಮುಂಛೌಸನ್
ಚಿಕ್ಕಮಕ್ಕಳ ಏಸಾಪ್
ಲೋಹ ವರಾಹ
ಬಾ ಕರೂ ಬಾ
ಗೋಳೂರಿನ ಗಾಯಕರು
ಪುರಾಣಿ ಪಂಚತಂತ್ರ
ಆಲಿವರ್ ಟ್ವಿಸ್ಟ್

(ಅಚ್ಚಿನಲ್ಲಿ)

ರಾಬಿನ್ ಹುಡ್
ವಿಲಿಯಂ ಟೆಲ್
ಭಾಸನ ಭಾರತ
ವಾಸವದತ್ತಾ
ವಸಂತಸೇನಾ
ಜೀಮೂತವಾಹನ

ಐದರಿಂದ ಹದಿನೈದು ವರುಷದ ವರೆಗಿನ ಮಕ್ಕಳಿಗೆ
ಶುಚಿಯಾದ ಸ್ವಾರಸ್ಯವಾದ ಸಚಿತ್ರವಾದ ಸಾಹಿತ್ಯ



ಮುದ್ರಣಕಾರರು :
ಬಿ. ಎಸ್. ನಾರಾಯಣರಾವ್
"ಓಂಕಾರ್ ಪ್ರೆಸ್", ಗಾಡನಪೇಟೆ, ಬೆಂಗಳೂರು ನಗರ

# ಅರಿಕೆ

ಮಕ್ಕಳಿಗೆ ಕತೆ ಹೇಳುವ ಮಹಾ ಕಷ್ಟಕಾರ್ಯದಲ್ಲಿ ಅನನ್ಯಸಾಮಾನ್ಯವಾದ ಹೆಸರನ್ನು ಗಳಿಸಿರುವವರ ವಿರಳವಾದ ಗುಂಪಿನಲ್ಲಿ ಮುಂದೆ ನಿಲ್ಲತಕ್ಕವನು ಡೆನ್ಮಾರ್ಕ್ ದೇಶದ **ಹ್ಯಾನ್ಸ್ ಕ್ರಿಶ್ಚಿಯನ್ ಆ್ಯಂಡರ್ಸನ್** ಎಂಬಾತನು. ಈತನ ಕತೆಗಳು ಇವನ ದೇಶದ ಮಕ್ಕಳಿಗೆ ಮಾತ್ರವಲ್ಲದೆ ಎಲ್ಲಾ ದೇಶದ ಮಕ್ಕಳಿಗೂ ಪ್ರಿಯವಾಗಿವೆ.

ಇಂತಹ ಮಕ್ಕಳ ಮಹಾಕವಿಯಾದ ಒಬ್ಬನ ಹದಿಮೂರು ಕತೆಗಳನ್ನು ಇಲ್ಲಿ ಕೊಟ್ಟಿದ್ದೇನೆ. ಪ್ರಕೃತದ ಈ ಕತೆಗಳು ಮಕ್ಕಳಿಗೆ ಮಾತ್ರವಲ್ಲದೆ ಪರಿಣತರಿಗೂ ರುಚಿಸತಕ್ಕವಾಗಿವೆ. ಏಕೆಂದರೆ ಇವು ಮಾನವ ಸ್ವಭಾವದ ಬಹುಮುಖಗಳನ್ನೂ ಮಾನವಜೀವನದಲ್ಲಿ ಬಹುಮುಖ್ಯವಾದ ಜನನಮರಣಗಳನ್ನೂ ಮಾನವಜೀವನವನ್ನು ಸವಿಮಾಡಿ ಸಾರ್ಥಕಗೊಳಿಸುವ ತಾಳ್ಮೆ, ದಯೆ, ಕ್ಷಮೆ ಮುಂತಾದ ಕಲ್ಯಾಣಗುಣಗಳನ್ನೂ ಕ್ಷೇತ್ರವಾಗಿ ಹೊಂದಿ, ಹಸುರಾಗಿ ಬೆಳೆದ ಕತೆಗಳು. ಮಕ್ಕಳಿಗೆ ಪ್ರಿಯವಾದ ಈ ಕತೆಗಳ ಹೊರಗಿನ ಹೊದಿಕೆಯಲ್ಲಿ ಜೀವನದ ಸುಖದುಃಖಗಳನ್ನು ಕಂಡ ವಯಸ್ಕರಿಗೆ ಆಪ್ಯಾಯಮಾನವಾಗುವ ಅರ್ಥವತ್ತಾದ ತಿರುಳು ಅಡಗಿಕೊಂಡಿದೆ.

ಈ ಆ್ಯಂಡರ್ಸನ್ನಿನ ಕತೆಗಳಲ್ಲಿ ಅತ್ಯಂತ ಪ್ರಸಿದ್ಧವಾದ 'ಅಗ್ಲಿ ಡಕ್ಲಿಂಗ್' ಮತ್ತು 'ಲಿಟಲ್ ಮರ್‌ಮೆಯ್ಡ್' ಎಂಬುದನ್ನು ಇನ್ನೆರಡು ಕತೆಗಳೊಡನೆ ಇದೇ ಪ್ರಕಾಶಕರು **"ಪಂಡಿತನ ನೆರಳು"** ಎಂಬ ಸಂಪುಟದಲ್ಲಿ ಪ್ರಕಟಿಸಿದ್ದಾರೆ. ಇದರಂತೆಯೇ ಈತನ ಮತ್ತೂ ಏಳು ಕತೆಗಳನ್ನು **"ಚಕ್ರವರ್ತಿಯ ಕೋಗಿಲೆ"** ಎಂಬ ಪುಸ್ತಕದಲ್ಲಿಯೂ ಹೊರಗೆ ತಂದಿದ್ದಾರೆ.

ಮಕ್ಕಳು ಈ ಮೂರು ಪುಸ್ತಕಗಳಲ್ಲಿ ಆ್ಯಂಡರ್ಸನ್ನಿನ ಕತೆಗಳ ರುಚಿಯನ್ನು ಕಾಣಲಿ ಎಂದು ಹಾರೈಸುತ್ತೇನೆ.

**—ಜಿ. ಪಿ. ರಾಜರತ್ನಂ**

# ವಿ ವ ರ ಣೆ

# ಕಡ್ಡಿ ಬುಡ್ಡಿ ಜಗಳ

ಒಬ್ಬ ಕವಿಯ ಕೊಟಡಿಯಲ್ಲಿ ಮೇಜಿನ ಮೇಲೆ ಒಂದು ಮಸಿಯ ಕುಡಿಕೆ ಕುಳಿತಿತ್ತು. ಅದು ಒಂದು ಸಲ "ಆಃ! ಒಂದು ಮಸಿಕುಡಿಕೆಯೊಳಗಿಂದ ಏನು ಹೊರಬೀಳಬಹುದು ಎಂದು ನೋಡಿದರೆ ಪರಮಾಶ್ಚರ್ಯವಾಗುತ್ತದೆ. ಮುಂದೇನು ಬರುವುದೋ! ಬಲ್ಲವರು ಯಾರು? ಆಶ್ಚರ್ಯ! ಪರಮಾಶ್ಚರ್ಯ!" ಎಂದಿತು.

ಆ ಮಸಿಕುಡಿಕೆ, ಪಕ್ಕದಲ್ಲಿದ್ದ ಬರೆಯುವ ಕಡ್ಡಿಯನ್ನೂ ಮೇಜಿನ ಮೇಲಿದ್ದ ಇತರ ವಸ್ತುಗಳನ್ನೂ ನೋಡುತ್ತಾ "ಹೌದು, ಹೌದು. ಅದೇ ನಾನು ಯಾವಾಗಲೂ ಹೇಳುವುದು. ನನ್ನಿಂದ ಏನೇನು ಚಿತ್ರವಿಚಿತ್ರವಾದ ಸಂಗತಿಗಳು ಸೃಷ್ಟಿಯಾಗುತ್ತವೆ ಎಂದು ನೋಡಿದರೆ ನನಗೇ ತುಂಬ ಆಶ್ಚರ್ಯವಾಗುತ್ತದೆ. ನಂಬುವುದಕ್ಕೇ ಆಗುವುದಿಲ್ಲ. ನಿಜವಾಗಿಯೂ ಈ ಕೊಟಡಿಯಲ್ಲಿರುವ ಆ ಮನುಷ್ಯ ತನ್ನ ಬರೆಯುವ ಕಡ್ಡಿಯನ್ನು ನನ್ನಲ್ಲಿ ಅದ್ದಿದಾಗ ನನ್ನಿಂದ ಏನು ಸೃಷ್ಟಿಯಾಗುತ್ತದೆ ಎಂಬುದು ನನಗೇ ತಿಳಿದಿರುವುದಿಲ್ಲ. ನನ್ನಲ್ಲಿ ಒಮ್ಮೆ ಅದ್ದಿ ಬಂದರೆ ಸಾಕು, ಅರ್ಧ ಹಾಳೆ ತುಂಬಿ ಹೋಗುತ್ತದೆ. ಅರ್ಧ ಹಾಳೆಯಲ್ಲಿ ಏನೇನು ಬರೆಯಬಹುದು ಎಂದುಕೊಂಡರೆ ಮೈ ಜುಮ್ಮೆನ್ನುತ್ತದೆ. ಆ ಕವಿಯ ಕೃತಿಗಳೆಲ್ಲ ನನ್ನಿಂದಲೇ ಸೃಷ್ಟಿಯಾದದ್ದು. ಅವನು ಬರೆದುದನ್ನು ಓದುವವರು ತಾವು ಕಂಡೆವೆಂದುಕೊಳ್ಳುವ ಪಾತ್ರಗಳೆಲ್ಲವೂ ನನ್ನಿಂದಲೇ ಆದವು. ಅವನ ಭಾವ, ಅವನ ರಸ, ಅವನ ಹಾಸ್ಯ, ಅವನ ಆ ಸ್ಪಷ್ಟವಾದ ಪ್ರಕೃತಿವರ್ಣನೆ ಇವೆಲ್ಲವೂ ಆಗುವುದಕ್ಕೆ ನಾನೇ ಕಾರಣ. ಆದರೆ ಅವುಗಳನ್ನೆಲ್ಲ ನಾನು ಹೇಗೆ ಮಾಡಿದೆನೆಂಬುದು ನನಗೇ ತಿಳಿಯದು. ನಿಜವಾಗಿ ನನಗೆ ಈ

ಪ್ರಕೃತಿಗಿಕೃತಿಗಳ ಪರಿಚಯವೇ ಇಲ್ಲ. ಆದರೂ ಏನೋ, ಅವುಗಳನ್ನು ಸೃಷ್ಟಿಸುವ ಶಕ್ತಿ ನನ್ನಲ್ಲಿ ಇದೆ. ಅಂತೂ, ದಿವ್ಯವಾದ ದೇವಕನ್ನಿಕೆಯರು, ಸುಂದರ ಸ್ತ್ರೀಯರು, ವೀರಾಧಿವೀರರು, ಮಹಾರಾಜರುಗಳು, ಇನ್ನೂ ಯಾರ್ಯಾರೋ ನನ್ನಿಂದ ಸಾಲುಸಾಲಾಗಿ ಹೊರಟು ಬಂದು ಜಗತ್ತಿಗೆಲ್ಲ ಆನಂದ ಕೊಡುವರು. ಇಷ್ಟು ಜನರನ್ನು ನಾನು ಹೇಗೆ ಸೃಷ್ಟಿಸಬೇಕೆಂಬುದನ್ನು ನಾನಂತೂ ಎಂದೂ ಯೋಚನೆ ಮಾಡುವುದಿಲ್ಲ" ಎಂದಿತು.

ಅದನ್ನು ಕೇಳಿ, "ನಿಜ. ನೀನು ಹೇಳುವುದು ನಿಜ" ಎಂದಿತು ಬರೆಯುವ ಕಡ್ಡಿ. "ನಿಜ. ನೀನು ಎಂದೆಂದೂ ಯೋಚನೆ ಮಾಡುವುದಿಲ್ಲ. ನಿನಗೆ ಯೋಚನೆ ಮಾಡುವ ರೂಢಿಯಿದ್ದಿದ್ದರೆ, ಇದನ್ನೆಲ್ಲ ಬರೆಯುವವನು ನೀನಲ್ಲವೆಂಬುದು ನಿನಗೆ ತಿಳಿಯುತ್ತಿತ್ತು. ಬರೆಯುವುದಕ್ಕೆ ಬೇಕಾದ ವಸ್ತುವನ್ನು ನೀನು ಒದಗಿಸುತ್ತೀಯೆ, ಅಷ್ಟೆ. ನನ್ನ ಹೃದಯದಲ್ಲಿ ಅಡಗಿರುವುದನ್ನು ಬೆಳಕಿಗೆ ತಂದು, ಅದನ್ನು ಕಾಗದದ ಮೇಲೆ ಬರೆಯಲು ಬೇಕಾದ ಕರಿಯ ನೀರನ್ನು ನೀನು ಒದಗಿಸುತ್ತೀಯೆ, ಅಷ್ಟೆ. ಬರೆಯುವ ಕೆಲಸ ಬರೆಯುವ ಕಡ್ಡಿಯದು. ಇದು ಯಾರಿಗೆ ತಾನೆ ಗೊತ್ತಿಲ್ಲ! ಇನ್ನೂ ಹಾಗೆ ನೋಡಿದರೆ, ಮಸಿಕುಡಿಕೆಗೆ ಕಾವ್ಯ ಅರ್ಥವಾಗುತ್ತದೆ ಎಂದರೆ, ಕೇಳಿದವರು ನಕ್ಕಾರು!"

"ನಿನಗೆ ಅನುಭವ ಸಾಲದು" ಎಂದಿತು ಮಸಿಕುಡಿಕೆ. "ನೀನು ಇನ್ನೂ ಕೆಲಸಕ್ಕೆ ಬಂದು ಒಂದು ವಾರವಾಗಿಲ್ಲ, ಆಗಲೇ ನಿನ್ನ ಮೈ ಮುಕ್ಕಾಲು ಸವೆದುಹೋಗಿದೆ. ನೀನೇನು ಕವಿ ಎಂದು ತಿಳಿದುಕೊಂಡಿದ್ದೀಯೊ? ನೀನು ಕೇವಲ ಸೇವಕ. ನೀನು ಬರುವುದಕ್ಕೆ ಮೊದಲು ನಿನ್ನಂತಹವರು ಎಷ್ಟೋ ಜನ ನನ್ನ ಸೇವೆಯಲ್ಲಿದ್ದರು. ನಿನಗಿಂತ ಚೆನ್ನಾಗಿದ್ದರು. ಕೆಲವರು ಬಣ್ಣಬಣ್ಣವಾಗಿದ್ದರು. ಕೆಲವರು ಗರಿಯ ಕಿರೀಟ ಹಾಕಿಕೊಂಡಿದ್ದರು. ಅವರೆಲ್ಲರೂ ಹೋದರು. ಈಗ ನೀನು ಇದ್ದೀ. ನಾನು ದಯಮಾಡಿ ಕೊಟ್ಟುದನ್ನು ಕಾಗದದ ಮೇಲೆ ಕೂರಿಸುವ ಆ ಕವಿಯೆಂಬ ಗುಮಾಸ್ತೆ ಬಂದು ಬರೆದಾಗ ನಿನ್ನಂತಹವರು ಇನ್ನೂ ಎಷ್ಟೋ ಜನ ಬಂದು ಹೋಗುವರು. ಈ ದಿನ ಅವನು ಬಂದು ನನ್ನ

ಎದುರಿಗೆ ಕುಳಿತಾಗ ನಾನು ಅವನಿಗೆ ಏನು ದಾನ ಮಾಡುವೆನೋ ನನಗೇ ಗೊತ್ತಿಲ್ಲ."

"ಛೀ! ಮಸಿಬುಡ್ಡಿ!" ಎಂದು ಬರೆಯುವ ಕಡ್ಡಿ ತಿರಸ್ಕಾರದಿಂದ ಕಿರಿಚಿತು.

ಆ ದಿನ ಸಂಜೆ ಆ ಕವಿ ತಡವಾಗಿ ಮನೆಗೆ ಬಂದ. ಅವನು ಒಂದು ಸಂಗೀತ ಕಛೇರಿಗೆ ಹೋಗಿದ್ದ. ಅಲ್ಲಿ ಒಬ್ಬ ಪಿಟೀಲು ಬಾರಿಸಿದುದನ್ನು ಕೇಳಿ ಬಹಳ ಮೆಚ್ಚಿಕೊಂಡು ಬಂದಿದ್ದ. ಅವನು ಆ ಪಿಟೀಲನ್ನು ನುಡಿಸಿದಾಗ, ಒಂದು ಸಲ ನೀರ ಹನಿಗಳು ಬಿದ್ದಂತೆ ಕಿಣಿಕಿಣಿನಾದವಾಗುವುದು. ಇನ್ನೊಂದು ಸಲ ಮುತ್ತುಗಳನ್ನು ಉರುಳಿಸಿಬಿಟ್ಟಂತೆ ಧ್ವನಿಯಾಗುವುದು. ಮತ್ತೊಂದು ಸಲ ಹಕ್ಕಿಗಳು ಮೇಳವಾಗಿ ಚಿಲಿಪಿಲಿಗುಟ್ಟಿದಂತೆ ಕೇಳಿಸುವುದು. ಇನ್ನೊಂದು ಸಲ ಕಾಡಿನ ಮರಗಳ ನಡುವೆ ಗಾಳಿ ಹಾದು ಹೋದಂತೆ ಶಬ್ದವಾಗುವುದು. ಕವಿಗೆ ತನ್ನ ಹೃದಯವೇ ಅಳುತ್ತಿದೆಯೋ, ಅಳುವಾಗ ಹೆಂಗಸಿನ ಧ್ವನಿಯಂತೆ ಕಿವಿಗೆ ಮಧುರವಾಗಿದೆಯೋ ಎಂದು ಅನುಭವವಾಯಿತು. ಪಿಟೀಲಿನ ತಂತಿಗಳಿಂದ ಮಾತ್ರವಲ್ಲ, ಪಿಟೀಲಿನ ಪ್ರತಿಯೊಂದು ಭಾಗದಿಂದಲೂ ಸಂಗೀತ ಚಿಮ್ಮಿ ಬರುತ್ತಿದೆಯೋ ಎನ್ನುವ ಹಾಗಿತ್ತು. ಅವನು ಬಾರಿಸಿದ ಹಾಡೋ ಕಠಿನವಾದದ್ದು. ಆದರೂ, ಇದೇನು ಯಾರು ಬೇಕಾದರೂ ಬಾರಿಸಬಹುದು ಎನ್ನುವಷ್ಟು ಸುಲಭವಾಗಿ ಪಿಟೀಲಿನ ಕಮಾನು ತಂತಿಗಳ ಮೇಲೆ ತೇಲಾಡುತ್ತಿತು. ಪಿಟೀಲು, ಕಮಾನು ಎರಡೂ ಆ ಸಂಗೀತಗಾರನ ಕೈ ನಡೆಸಿದಂತೆ ನಡೆಯುತ್ತಿದ್ದರೂ ಅವು ತಾವೇ ಸ್ವತಂತ್ರವಾಗಿ ಓಡಾಡುತ್ತಿವೆಯೋ ಎನ್ನುವ ಹಾಗಿತ್ತು. ಆ ವಾದ್ಯಕ್ಕೆ ಜೀವ ಬಂದ ಹಾಗಿತ್ತು, ಪ್ರಾಣ ಬಂದ ಹಾಗಿತ್ತು. ಆ ವಾದ್ಯದಿಂದ ಹೊರಬಿದ್ದ ಇಂಪಾದ ಸಂಗೀತಕ್ಕೆ ಸೋತು, ಕೇಳುತ್ತಿದ್ದವರು ಬಾರಿಸುವವನನ್ನೇ ಮರೆತಿದ್ದರು. ಆದರೆ ಕವಿ ಅವನನ್ನು ಹಾಗೆ ಮರೆಯಲಿಲ್ಲ. ಅವನನ್ನು ಜ್ಞಾಪಕದಲ್ಲಿಟ್ಟು, ಅವನಿಗೆ ಹೆಸರು ಕೊಟ್ಟು, ಆ ವಿಷಯವನ್ನು ಕುರಿತ ಭಾವನೆಗಳನ್ನು ಬರೆದ. "ಪಿಟೀಲೂ ಕಮಾನೂ ತಾವು ನುಡಿದೆವೆಂದು ಹೆಮ್ಮೆ ಪಟ್ಟರೆ ಅದು ಎಂಥ ಮೂರ್ಖತನ! ಆದರೂ ನಾವು ಮನುಷ್ಯರು ಎಷ್ಟು

ಸಲ ಇಂಥ ತಪ್ಪು ಮಾಡುವುದಿಲ್ಲ! ಕವಿ, ಶಿಲ್ಪಿ, ಪ್ರಯೋಗಶಾಲೆಯಲ್ಲಿನ ವಿಜ್ಞಾನಿ, ರಣರಂಗದ ಸೈನ್ಯಾಧಿಪತಿ—ಈ ನಾವೆಲ್ಲರೂ ಈ ತಪ್ಪು ಮಾಡುತ್ತೇವೆ. ಆದರೂ ನಾವೆಲ್ಲರೂ ಆ ಸರ್ವಶಕ್ತನಾದ ಭಗವಂತನ ಕೈಯಲ್ಲಿ ಉಪಕರಣಗಳು ಮಾತ್ರ. ಎಲ್ಲ ಗೌರವಗಳೂ ಸಲ್ಲಬೇಕಾದುದು ಆತನಿಗೆ ಮಾತ್ರ. ನಾವು ಹೆಮ್ಮೆಪಡುವುದಕ್ಕೆ, ನಮ್ಮದು ಎಂಬುದು ಏನೂ ಇಲ್ಲ." ಹೌದು, ಇದೇ ಆ ಕವಿ ಬರೆದದ್ದು. ಅವನು ಅದನ್ನು ಒಂದು ಉಪಮಾನದ ಕತೆಯನ್ನಾಗಿ ಬರೆದು, 'ಸ್ವಾಮಿಯೂ ಅವನ ಉಪಕರಣಗಳೂ' ಎಂದು ಅದಕ್ಕೆ ಹೆಸರು ಇಟ್ಟ.

* * *

"ನೋಡಿದೆಯ, ಅಮ್ಮಯ್ಯ! ಅದು ನಿನಗೆ ಏಟು!" ಎಂದು ತಾವಿಬ್ಬರೇ ಇದ್ದಾಗ, ಬರೆಯುವ ಕಡ್ಡಿ ಮಸಿಯಕುಡಿಕೆಯನ್ನು ಕುರಿತು ಹೇಳಿತು. "ನಾನು ಬರೆದುದನ್ನು ಅವನು ಗಟ್ಟಿಯಾಗಿ ಓದಿ ಹೇಳಿದನಲ್ಲ, ಕೇಳಿಸಿತೆ?" ಎಂದಿತು.

"ಹೌದು. ಅದನ್ನೇ ನಾನು ನಿನಗೆ ಬರೆಯುವುದಕ್ಕೆ ಕೊಟ್ಟದ್ದು. ನಿನ್ನ ಜಂಬದ ಕೋಳಿಯ ಜುಟ್ಟು ಕತ್ತರಿಸಬೇಕು ಎಂದು ನಾನು ಅದನ್ನು ಕೊಟ್ಟೆ. ನಿನ್ನ ಮುಖಕ್ಕೆ ಮಂಗಳಾರತಿಯಾಯಿತೆಂದು ನಿನಗೆ ಅಷ್ಟೂ ಗೊತ್ತಾಗಲಿಲ್ಲವೆ! ನಿನಗೆ ಸೋಲಬೇಕೆಂದೇ ನಾನು ಹಾಗೆ ಚುಚ್ಚಿದ್ದು" ಎಂದಿತು ಮಸಿಕುಡಿಕೆ.

ಬರೆಯುವ ಕಡ್ಡಿ ರೇಗಿ, "ಶಾಯಿಬುಡ್ಡಿ!" ಎಂದು ಕೂಗಿಕೊಂಡಿತು.

"ನೀನೇನು ಮಹಾ! ಗೀಚುವ ಕಡ್ಡಿ!" ಎಂದು ಮಸಿಯಕುಡಿಕೆ ಪ್ರತಿಯಾಗಿ ಕೂಗಿಕೊಂಡಿತು. ಒಂದಕ್ಕೊಂದು ಸರಿಯಾದ ಉತ್ತರ ಕೊಟ್ಟೆವೆಂದು ಎರಡಕ್ಕೂ ತೃಪ್ತಿಯಾಯಿತು. ಉತ್ತರ ಕೊಟ್ಟು ಇನ್ನೊಬ್ಬರ ಬಾಯಿ ಮುಚ್ಚಿದೆನೆಂದು ತೃಪ್ತಿಪಟ್ಟುಕೊಂಡದ್ದರಲ್ಲಿ ಒಂದು ಸಂತೋಷ; ಆದಾದ ಮೇಲೆ ನಿದ್ರೆ ಚೆನ್ನಾಗಿ ಬಂತು. ಆದರೆ ಕವಿ ನಿದ್ರೆ ಮಾಡಲಿಲ್ಲ. ಮುತ್ತುಗಳು ಉರುಳಿದಂತೆ, ಮರಗಳ ನಡುವೆ ಗಾಳಿ

ಬೀಸಿದಂತೆ ಆ ಪಿಟೀಲಿನ ಗಾನ ಹೇಗೆ ಏರಿ ಏರಿ ಬರುತ್ತಿತ್ತೋ ಹಾಗೆ ಅವನ ಹೃದಯದಲ್ಲಿ ಭಾವನೆಗಳು ಉಕ್ಕಿ ಉಕ್ಕಿ ಬರುತ್ತಿದ್ದುವು. ಹಾಗೆ ತನ್ನ ಹೃದಯದಲ್ಲಿ ಬಂದ ಭಾವನೆಗಳು, ಸರ್ವ ಮನಸ್ಸುಗಳಿಗೂ ಮಹಾಗುರುವಾದ ಆತನ ಮನಸ್ಸಿನಿಂದ ಬಂದ ಕಿರಣಗಳೆಂದು ಅವನು ತಿಳಿದುಕೊಂಡನು.

"ಸಕಲ ಗೌರವಗಳೂ ಆತನಿಗೇ ಸಲ್ಲತಕ್ಕದ್ದು" ಎಂದು ಆ ಕವಿ ಎಂದುಕೊಂಡನು.

# ಬಲು ಚೆಲುವು ಗುಲಾಬಿ

ಹಿಂದೆ ಒಬ್ಬಳು ಮಹಾರಾಣಿ. ಅವಳ ತೋಟದಲ್ಲಿ ಎಲ್ಲಾ ಋತುಗಳಲ್ಲೂ ಬಲು ಸೊಗಸಾದ ಹೂವು ಬಿಡುತ್ತಿತ್ತು. ಪ್ರಪಂಚದ ಎಲ್ಲಾ ಭಾಗಗಳ ಹೂವೂ ಅಲ್ಲಿ ಸಿಕ್ಕುತ್ತಿತ್ತು. ಅವಳಿಗೆ ಗುಲಾಬಿ ಎಂದರೆ ಪ್ರಾಣ. ಅದಕ್ಕಾಗಿ, ಎಲ್ಲೆಲ್ಲಿ ಯಾವಯಾವ ಜಾತಿಯ ಗುಲಾಬಿ ದೊರಕಬಹುದೋ ಅವುಗಳೆನ್ನೆಲ್ಲ ತನ್ನ ತೋಟದಲ್ಲಿ ಬೆಳೆಯಿಸಿದ್ದಳು. ಕೆಲವು ಗೋಡೆಯ ನೆರಳಿನಲ್ಲಿ ಬೆಳೆದರೆ, ಇನ್ನು ಕೆಲವು ಕಂಬಗಳ ಸುತ್ತ ಸುತ್ತಿಕೊಂಡು, ಕಿಟಕಿಯ ಕಂಬಿಗಳಿಗೆ ಹಬ್ಬಿಕೊಂಡು, ಅಂಗಳದಲ್ಲೆಲ್ಲ ಹರಡಿಕೊಂಡು, ಮನೆಯ ಮೇಲ್ಛಾವಣಿಯ ಮೇಲೆ ಹತ್ತಿಕೊಂಡು ಹೋಗುತ್ತಿದ್ದುವು. ಯಾವ ಯಾವ ಸುವಾಸನೆ, ಯಾವ ಯಾವ ಬಣ್ಣ ಬೇಕಾದರೂ ಅಲ್ಲಿ ಸಿಕ್ಕುತ್ತಿತ್ತು.

ಇಷ್ಟಾದರೂ ಆ ಅರಮನೆಯ ಒಳಗಡೆ ಚಿಂತೆಯೂ ದುಃಖವೂ ಮನೆಮಾಡಿಕೊಂಡಿದ್ದವು. ಮಹಾರಾಣಿ ರೋಗದಿಂದ ನರಳುತ್ತ ಹಾಸಿಗೆ ಹಿಡಿದಿದ್ದಳು. ಅವಳು ಬದುಕುವುದು ಸಾಧ್ಯವೇ ಇಲ್ಲವೆಂದು ವೈದ್ಯರೆಲ್ಲರೂ ಹೇಳಿದ್ದರು. ಆದರೆ ಆ ವೈದ್ಯರಲ್ಲಿ ಒಬ್ಬ, ಮಿಕ್ಕವರಿಗಿಂತ ಬುದ್ಧಿವಂತನಾದವನು, “ಆದರೂ ಆ ಮಹಾರಾಣಿಯ ಜೀವ ಉಳಿಸುವುದಕ್ಕೆ ಒಂದು ಉಪಾಯವಿದೆ. ಜಗತ್ತಿನಲ್ಲೆಲ್ಲಾ ಅತಿ ಚೆಲುವಾದ ಗುಲಾಬಿಯನ್ನು ಅವಳಿಗೆ ತಂದುಕೊಡಿರಿ. ಅತ್ಯಂತ ಪ್ರಕಾಶಮಾನವಾದ, ಪರಿಶುದ್ಧವಾದ ಪ್ರೇಮ ಅದರಲ್ಲಿ ವ್ಯಕ್ತವಾಗಬೇಕು. ಅಂಥದನ್ನು ಇವಳು ಕಣ್ಣು ಮುಚ್ಚುವ ಮೊದಲೆ ತಂದುಕೊಟ್ಟರೆ, ಇವಳು ಸಾಯುವುದಿಲ್ಲ” ಎಂದನು.

ಆಗ, ಜಗತ್ತಿನ ಪ್ರತಿಯೊಂದು ತೋಟದಿಂದಲೂ ಬಗೆಬಗೆಯ ಗುಲಾಬಿಗಳನ್ನು ತಂದರು. ಆದರೆ ಯಾವುದೂ ಸರಿಹೋಗಲಿಲ್ಲ. ಹೂವು ಪ್ರೇಮದ ತೋಟದಿಂದ ತಂದುದಾಗಿರಬೇಕು. ಆದರೆ ಅಲ್ಲಿ ತಂದ ಯಾವುದರಲ್ಲಿಯೂ ಆ ಪ್ರೇಮದ ಗುರುತು ಕಾಣಿಸಲಿಲ್ಲ. ಕವಿಗಳು ಆ ಪ್ರೇಮದ ಗುಲಾಬಿಯನ್ನು ಕುರಿತು ಹಾಡಿದರು, ತಮತಮಗೆ ತೋಚಿದಂತೆ ಅದಕ್ಕೆ ಹೆಸರಿಟ್ಟರು. ಆ ಹೂವಿನ ವರ್ಣನೆಯನ್ನು ದೇಶದೇಶಗಳಲ್ಲೆಲ್ಲ ಪ್ರಸಿದ್ಧಪಡಿಸಿದರು.

"ಇನ್ನೂ ಯಾರೂ ಆ ಹೂವಿನ ಹೆಸರು ತಿಳಿದಿಲ್ಲ. ಅದು ಎಲ್ಲಿ ಅರಳುವುದೆಂಬುದನ್ನು ಯಾರೂ ತೋರಿಸಿಕೊಟ್ಟಿಲ್ಲ. ಪ್ರಾಣಪ್ರಿಯರನ್ನು ಸಮಾಧಿ ಮಾಡಿದ ಕಡೆ ಅದು ಹುಟ್ಟಿದುದಲ್ಲ. ದೇಶಪ್ರೇಮದಿಂದ ಸತ್ತವನನ್ನು ಹೂತ ಕಡೆಯೂ ಅದು ಹುಟ್ಟಿದುದಲ್ಲ. ಇವರ ಹೆಸರಿನ ಹೂಗಳನ್ನು ಎಂದೆಂದಿಗೂ ಹಾಡಿ ಹರಸುವರಾದರೂ, ಈಗ ನಾವು ಹುಡುಕುತ್ತಿರುವ ಹೂವು ಅದಲ್ಲ" ಎಂದು ಒಬ್ಬ ಪಂಡಿತ ಹೇಳಿದ.

"ಅದು ಎಲ್ಲಿ ಅರಳುತ್ತದೆ ಎಂದು ನಾನು ಬಲ್ಲೆ" ಎಂದು ಒಬ್ಬ ತಾಯಿ, ರಾಣಿಯ ಹಾಸಿಗೆಯ ಬಳಿಗೆ ತನ್ನ ಮುದ್ದುಮಗುವನ್ನು ಕರೆದುಕೊಂಡು ನಗುನಗುತ್ತ ಬಂದಳು. "ಪ್ರಪಂಚದಲ್ಲೆಲ್ಲಾ ಬಲು ಚೆಲುವಾದ ಗುಲಾಬಿ ಎಲ್ಲಿ ಉಂಟೆಂಬುದು ನನಗೆ ಗೊತ್ತು. ಅದು ನನ್ನ ಈ ಮುದ್ದುಮಗುವಿನ ನಸುಕೆಂಪಾದ ಕೆನ್ನೆಯಲ್ಲಿದೆ. ಅಲ್ಲಿ ಶಿಶುತನದ ಪರಿಶುದ್ಧವಾದ, ಪವಿತ್ರವಾದ ಪ್ರೀತಿ ಕಾಣುತ್ತದೆ. ನಿದ್ರೆ ಮಾಡಿ ಆಯಾಸ ಕಳೆದು, ಅದು ಕಣ್ಣು ತೆರೆದು, ತಾಯ ಮೇಲಣ ಪ್ರೇಮದಿಂದ ನಸುನಗುತ್ತದೆ."

"ಇದೇನೋ ಚೆಲುವಾದ ಗುಲಾಬಿಯೇ, ನಿಜ. ಆದರೆ ಇದಕ್ಕಿಂತ ಚೆಲುವಾದುದು ಒಂದುಂಟು" ಎಂದ ಆ ಪಂಡಿತ.

"ಹೌದು. ಇದಕ್ಕಿಂತ ಚೆಲುವಾದುದುಂಟು. ನಾನು ಅದನ್ನು ಕಂಡಿದ್ದೇನೆ. ಅದಕ್ಕಿಂತ ಚೆಲುವಾದ, ಶುದ್ಧವಾದ ಗುಲಾಬಿಯೇ ಇಲ್ಲ. ಆದರೆ ಅದು ಕಾಡುಗುಲಾಬಿಯ ಎಲೆಯಂತೆ ಬಿಳಿದಾಗಿತ್ತು. ರಾಣಿಯ ಕೆನ್ನೆಗಳ ಮೇಲೆ ಅದನ್ನು ಕಂಡೆ. ಆಗ ರಾಣಿ ತನ್ನ ಚಿನ್ನದ ಕಿರೀಟ

ವನ್ನು ತೆಗೆದಿರಿಸಿ, ರಾತ್ರಿಯೆಲ್ಲಾ ತನ್ನ ಕಾಯಿಲೆ ಮಗುವನ್ನು ತೋಳು ಗಳಲ್ಲಿ ಎತ್ತಿಕೊಂಡು, ಎಚ್ಚರವಾಗಿದ್ದಳು. ಅವಳು ಅತ್ತು, ಅದಕ್ಕೆ ಮುತ್ತಿಟ್ಟು, ಅದು ಬದುಕಲೆಂದು ಪ್ರಾರ್ಥಿಸಿದಳು. ಸಂಕಟದ ಸಮಯ ದಲ್ಲಿ ಹಾಗೆ ಪ್ರಾರ್ಥನೆ ಮಾಡುವುದು ತಾಯಿ ಒಬ್ಬಳಿಗೆ ಮಾತ್ರ ಸಾಧ್ಯ!" ಎಂದು ಒಬ್ಬ ಹೆಂಗಸು ಹೇಳಿದಳು.

"ಶೋಕದ ಈ ಬಿಳಿಯ ಗುಲಾಬಿ ಪವಿತ್ರವಾದುದು, ಪರಮಾಶ್ಚರ್ಯ ಕರವಾದುದು. ಆದರೆ ನಾವು ಹುಡುಕುತ್ತಿರುವುದು ಅದನ್ನಲ್ಲ" ಎಂದ ವೈದ್ಯ.

"ಹೌದು. ಅದಲ್ಲ. ಪ್ರಪಂಚದಲ್ಲೆಲ್ಲ ಅತಿ ಚೆಲುವು ಗುಲಾಬಿ ಯನ್ನು ನಾನು ದೇವರ ಕಾಲ ಬಳಿ ಕಂಡಿದ್ದೇನೆ" ಎಂದು ಹೇಳಿದ, ಒಬ್ಬ ದೇವಸ್ಥಾನದ ಪೂಜಾರಿ. "ಆ ಹೂವು ಗಂಧರ್ವನ ಮುಖದಂತೆ ಹೊಳೆಯುತ್ತಿತ್ತು. ಚಿಕ್ಕ ಕನ್ನಿಕೆಯೊಬ್ಬಳು ದೇವರ ಮುಂದೆ ಮಂಡಿ ಯೂರಿ, ಏನೋ ವರ ಕೇಳಿಕೊಳ್ಳುತ್ತಿದ್ದಳು. ಅವಳ ಮುದ್ದಾದ ಕೆನ್ನೆ ಗಳ ಮೇಲೆ ಬಿಳಿಯ ರೋಜಗಳೂ ಕೆಂಪು ರೋಜಗಳೂ ಕುಣಿದಾಡು ತ್ತಿದ್ದುವು. ಅವಳು ದೇವರ ಮುಖವನ್ನು ಕತ್ತೆತ್ತಿ ನೋಡಿದಾಗ ಅವಳ ಕಣ್ಣುಗಳಲ್ಲಿ ಪರಿಶುದ್ಧವಾದ, ಪವಿತ್ರವಾದ ಪ್ರೇಮ ತುಳುಕುತ್ತಿತ್ತು."

"ಆ ಕನ್ನಿಕೆಯ ಇಷ್ಟಾರ್ಥ ಕೈಗೂಡಲಿ. ಆದರೆ ಯಾರೂ ಇನ್ನೂ ಆ ಬಲು ಚೆಲುವು ಗುಲಾಬಿಯನ್ನು ವರ್ಣಿಸಿ ಹೇಳಿಲ್ಲ" ಎಂದ ಆ ಪಂಡಿತ.

ಆಗ ಆ ಕೊಟಡಿಗೆ ಒಂದು ಸಣ್ಣ ಮಗು ಬಂತು. ಅದು ಆ ರಾಣಿಯ ಸಣ್ಣಮಗು. ಅದರ ಕಣ್ಣುತುಂಬ ನೀರು. ಅದರ ಕೆನ್ನೆಯ ಮೇಲೆ ಕಣ್ಣೀರು ಮಿನುಗುತ್ತಿತ್ತು. ಆ ಮಗುವಿನ ಕೈಯಲ್ಲಿ ಒಂದು ಪುಸ್ತಕವಿತ್ತು. ಅದರ ಹೊದಿಕೆ ಬಹು ಮೃದುವಾಗಿತ್ತು. "ಅಮ್ಮಾ, ನಾನು ಓದುತ್ತೇನೆ, ಕೇಳು" ಎಂದಿತು, ಆ ಮಗು. ತಾಯ ಹಾಸಿಗೆಯ ಪಕ್ಕದಲ್ಲಿ ಕುಳಿತು, ಮನುಷ್ಯನ ಉದ್ಧಾರಕ್ಕಾಗಿ ದೇವರು ಹೇಗೆ ಮೀನಾಗಿ, ಆಮೆಯಾಗಿ, ಹಂದಿಯಾಗಿ ಪುನಃಪುನಃ ಹುಟ್ಟಿಬಂದ ಎಂಬುದನ್ನು ಆ ಮಗು ಓದಿತು. "ಇದಕ್ಕಿಂತ ದೊಡ್ಡದಾದ ಪ್ರೇಮ ಲೋಕದಲ್ಲಿ ಬೇರೆ

ಇಲ್ಲ" ಎಂದು ಆ ಮಗು ಓದಿದಾಗ, ಕಾಯಿಲೆ ಮಲಗಿದ್ದ ರಾಣಿಯ ಕೆನ್ನೆಗಳಲ್ಲಿ ಗುಲಾಬಿಯ ಕೆಂಪು ಹರಡಿಕೊಂಡಿತು. ಕಣ್ಣುಗಳಲ್ಲಿ ಕಾಂತಿ ತುಂಬಿಕೊಂಡು, ತಿಳಿಯಾಯಿತು. ಆ ಮಗು ಓದುತ್ತಿದ್ದ ಪುಸ್ತಕದಲ್ಲಿ ಪರಮಾತ್ಮನ ಲೋಕಪ್ರೇಮದ ಚೆಲುವು ಗುಲಾಬಿಯ ಪುಷ್ಪ ಅರಳುವುದನ್ನು ಆಕೆ ಕಂಡಳು.

"ಈಗ ನಾನರಿತೆ. ಇದನ್ನು, ಈ ಬಲು ಚೆಲುವು ಗುಲಾಬಿಯನ್ನು ಕಂಡವರು ಎಂದಿಗೂ ಸಾಯುವುದಿಲ್ಲ" ಎಂದಳು ಆ ರಾಣಿ.

# ಒಬ್ಬ ತಾಯಿಯ ಕತೆ

ತಾಯಿಯೊಬ್ಬಳು ತನ್ನ ಸಣ್ಣ ಮಗುವಿನ ಬಳಿ ಕುಳಿತಿದ್ದಳು. ಅದು ಬದುಕುವುದಿಲ್ಲವೆಂದು ಹೆದರಿ ಅವಳಿಗೆ ದುಃಖವಾಯಿತು. ಆ ಮಗುವಿನ ಮುಖದಲ್ಲಿ ರಕ್ತವಿರಲಿಲ್ಲ. ಅದು ಮುಚ್ಚಿದ ಕಣ್ಣು ಬಿಚ್ಚಿರಲಿಲ್ಲ. ಉಸಿರು ತುಂಬಾ ಭಾರವಾಗಿತ್ತು. ಆ ಮಗುವನ್ನು ಕಂಡು ತಾಯ ದುಃಖ ಇನ್ನೂ ಹೆಚ್ಚಾಯಿತು. ಆಗ ಯಾರೋ ಬಾಗಿಲು ತಟ್ಟಿದರು, ಯಾವನೋ ಮುದುಕ ಒಳಕ್ಕೆ ನಡೆದು ಬಂದ. ದೊಡ್ಡದೊಂದು ವಸ್ತ್ರದಲ್ಲಿ ತನ್ನ ಮೈ ಮುಚ್ಚಿ ಕೊಂಡಿದ್ದ. ಅವನ ಮುಖ ಕೂಡ ಕಾಣುತ್ತಿರಲಿಲ್ಲ. ನಿಜವೇ, ಅಂತಹ ಚಳಿಗಾಲದಲ್ಲಿ ಮುದುಕ ಮತ್ತೇನು ಮಾಡಬೇಕು! ಮಗು ಒಂದು ಕ್ಷಣ ಕಾಲ ನಿದ್ರೆಮಾಡಿತು. ತಾಯಿ, ಆ ಮುದುಕ ಚಳಿಗೆ ನಡುಗುವುದನ್ನು ನೋಡಿ, ಎದ್ದು, 'ಒಳಗೆ ಬಾ' ಎಂದು ಕರೆದಳು. ಮುದುಕ ಒಳಗೆ ಬಂದು, ಕುಳಿತು, ತೊಟ್ಟಿಲು ತೂಗಿದ. ತಾಯಿ ತಾನೂ ಅಲ್ಲಿಯೆ ಹತ್ತಿರ ದಲ್ಲಿ ಕುಳಿತು, ಮಗುವಿನ ಪುಟ್ಟಕೈಯನ್ನು ಹಿಡಿದುಕೊಂಡು, ಅದರ ಮುಖ ನೋಡಿದಳು.

"ಈ ಮಗು ಬದುಕುತ್ತದೆ, ಅಲ್ಲವೆ? ನನಗಿರುವ ಈ ಒಂದೇ ಮಗುವನ್ನು ದೇವರು ಕಿತ್ತುಕೊಳ್ಳುವುದಿಲ್ಲ, ಅಲ್ಲವೆ?" ಎಂದಳು.

ಆ ಮುದುಕ ಮತ್ತೆ ಯಾರೂ ಅಲ್ಲ. ಅವನೇ ಮೃತ್ಯು. ತಾಯಿ ಹೇಳಿದ ಮಾತಿಗೆ, ಅವನು ಒಂದು ರೀತಿಯಾಗಿ ತಲೆತೂಗಿದ. ಅದಕ್ಕೆ ಹೌದು ಎಂದಾದರೂ ಅರ್ಥವಾಗಬಹುದಿತ್ತು, ಇಲ್ಲ ಎಂದಾದರೂ ಆಗು ತ್ತಿತ್ತು. ತಾಯಿ ಮುಖ ತಗ್ಗಿಸಿಕೊಂಡು, ಗಳಗಳ ಅತ್ತಳು. ಅತ್ತು ಅತ್ತು ತಲೆ ಭಾರವಾಯಿತು. ಮೂರು ರಾತ್ರಿ ಮೂರು ಹಗಲು ಅವಳಿಗೆ ನಿದ್ರೆಯಿರ

ಲಿಲ್ಲ. ಒಂದು ಗಳಿಗೆ ಕಣ್ಣುಮುಚ್ಚಿದಳು. ಒಂದೇ ಗಳಿಗೆ. ಮರುಗಳಿಗೆಯೇ ಚಳಿಗೆ ನಡುಗಿ, ಬೆದರಿ ಎದ್ದು, ಕೊಟಡಿಯ ಸುತ್ತ ನೋಡಿದಳು. ಮುದುಕ ಕಾಣಲಿಲ್ಲ. ತನ್ನ ಮಗು ಕೂಡ ಕಾಣಲಿಲ್ಲ! ಮುದುಕ ಅದನ್ನು ಎತ್ತಿ ಕೊಂಡು ಹೋಗಿದ್ದ. ಕೊಟಡಿಯ ಮೂಲೆಯಲ್ಲಿದ್ದ ಗಡಿಯಾರ ಗಂಟೆ ಹೊಡೆಯಿತು. ಅದರ ಕೊನೆಯ ಗಂಟೆಯ ಶಬ್ದ ನಿಂತೊಡನೆ, ಆ ತಾಯಿ ತನ್ನ ಮಗುವಿಗಾಗಿ ಕೂಗಿಕೊಳ್ಳುತ್ತ ಮನೆಯಿಂದ ಹೊರಗೆ ಓಡಿದಳು.

ಹೊರಗಡೆ ಚಳಿಯಲ್ಲಿ ಒಬ್ಬ ಹೆಂಗಸು ಕರಿಯ ಮುಸುಕು ಹಾಕಿ ಕುಳಿತಿದ್ದಳು. ಅವಳು "ಮೃತ್ಯು ನಿನ್ನ ಮನೆಗೆ ಬಂದು ಕುಳಿತಿದ್ದ. ಅವನು ನಿನ್ನ ಮಗುವನ್ನು ಎತ್ತಿಕೊಂಡು ಅವಸರವಸರವಾಗಿ ಹೋದುದನ್ನು ನಾನು ಕಂಡೆ. ಅವನು ಗಾಳಿಗಿಂತ ವೇಗವಾಗಿ ಹೆಜ್ಜೆ ಹಾಕುತ್ತಾನೆ. ಅವನು ತಾನು ತೆಗೆದುಕೊಂಡು ಹೋದುದನ್ನು ಎಂದೂ ಹಿಂದಿರುಗಿಕೊಡುವುದಿಲ್ಲ" ಎಂದಳು.

ಅದಕ್ಕೆ ಆ ತಾಯಿ "ಓ! ಅವನು ಹೋದ ಮಾರ್ಗವನ್ನು ಮಾತ್ರ ನನಗೆ ತಿಳಿಸು. ನನಗೆ ಆ ದಾರಿ ಹೇಳು. ನಾನು ಅವನನ್ನು ಕಂಡು ಹಿಡಿಯುತ್ತೇನೆ" ಎಂದಳು.

ಅದಕ್ಕೆ ಆ ಕಪ್ಪು ಬಟ್ಟೆಗಳನ್ನು ಉಟ್ಟ ಹೆಂಗಸು "ನನಗೆ ಅವನು ಹೋದ ದಾರಿ ಗೊತ್ತು. ಆದರೆ ನಿನಗೆ ಅದನ್ನು ತಿಳಿಸುವ ಮೊದಲು, ನೀನು ನಿನ್ನ ಮಗುವಿಗೆ ಹಾಡುತ್ತಿದ್ದ ಹಾಡುಗಳನ್ನೆಲ್ಲ ನನಗೆ ಒಮ್ಮೆ ಹಾಡಿ ತೋರಿಸು. ಆ ಹಾಡುಗಳೆಂದರೆ ನನಗೆ ಬಹುಪ್ರೀತಿ. ನಾನು ಅವುಗಳನ್ನು ಹಿಂದೆ ಎಷ್ಟೋ ಸಲ ಕೇಳಿದ್ದೇನೆ. ನನ್ನ ಹೆಸರು ರಾತ್ರಿ ಎಂದು. ನೀನು ಹಾಡುವಾಗ ನಿನ್ನ ಕಣ್ಣಿಂದ ಕಣ್ಣೀರು ಹರಿದುದನ್ನು ನಾನು ಕಂಡಿ ದ್ದೇನೆ" ಎಂದಳು.

ಅದಕ್ಕೆ ಆ ತಾಯಿ "ಅವು ಎಲ್ಲವನ್ನೂ ನಾನು ನಿನಗೆ ಹಾಡುತ್ತೇನೆ. ಆದರೆ ಈಗ ಮಾತ್ರ ನನ್ನನ್ನು ತಡೆಯಬೇಡ. ನಾನು ಹೋಗಿ ಮೃತ್ಯು ವನ್ನು ಹಿಡಿದು, ನನ್ನ ಮಗುವನ್ನು ಪಡೆಯಬೇಕು" ಎಂದಳು.

ಆದರೆ ರಾತ್ರಿ ಮಾತನಾಡದೆ ಮೌನವಾಗಿ ಕುಳಿತುಬಿಟ್ಟಳು. ಆಗ ಆ ತಾಯಿ ಅತ್ತಳು. ಅಳುತ್ತಾ ಹಾಡಿದಳು. ಕೈಕೈ ಹಿಸುಕಿಕೊಂಡಳು.

ತುಂಬ ಹಾಡು ಹಾಡಿದಳು. ಅದಕ್ಕಿಂತ ಹೆಚ್ಚಾಗಿ ಕಣ್ಣೀರು ಕರೆದಳು. ಕೊನೆಗೆ ರಾತ್ರಿ "ಹೋಗು. ಬಲಗಡೆಗೆ ತಿರುಗು. ಒಂದು ದೊಡ್ಡ ಅರಣ್ಯ ಸಿಕ್ಕುತ್ತದೆ. ಮೃತ್ಯು ನಿನ್ನ ಪುಟ್ಟ ಮಗುವನ್ನು ಎತ್ತಿಕೊಂಡು ಆ ದಾರಿಯಲ್ಲಿ ಹೋದುದನ್ನು ನಾನು ಕಂಡೆ" ಎಂದಳು.

ಕಾಡಿನೊಳಕ್ಕೆ ಬಂದಾಗ, ದಾರಿ ಕವಲಾಗಿ ಒಡೆಯಿತು. ಯಾವ ದಾರಿ ಹಿಡಿಯಬೇಕೆಂಬುದು ಆ ತಾಯಿಗೆ ತೋಚಲಿಲ್ಲ. ಪಕ್ಕದಲ್ಲಿ ಒಂದು ಮುಳ್ಳುಪೊದೆ ಇತ್ತು. ಚಳಿಗಾಲವಾದುದರಿಂದ ಅದರಲ್ಲಿ ಎಲೆಯಿರಲಿಲ್ಲ, ಹೂವಿರಲಿಲ್ಲ. ಅದರ ಮೇಲೆಲ್ಲ ಮಂಜುಗೆಡ್ಡೆ ಕಟ್ಟಿಕೊಂಡಿತ್ತು. "ಮೃತ್ಯು ಈ ದಾರಿಯಲ್ಲಿ ಹೋದುದನ್ನು ನೀನು ನೋಡಿದೆಯ? ಅವನ ಕೈಯಲ್ಲಿ ನನ್ನ ಪುಟ್ಟ ಮಗುವಿತ್ತೆ?" ಎಂದು ಆ ತಾಯಿ ಅದನ್ನು ಕೇಳಿದಳು.

"ಹೌದು, ನೋಡಿದೆ. ಆದರೆ ನನಗೆ ನಿನ್ನ ಎದೆಯಲ್ಲಿ ಎಡೆ ಕೊಟ್ಟ ಹೊರತು, ಅವನು ಯಾವ ಹಾದಿ ಹಿಡಿದನೆಂದು ನಾನು ತಿಳಿಸುವುದಿಲ್ಲ. ಇಲ್ಲಿಯೋ ಬಹಳ ಚಳಿ. ಮಂಜೆಲ್ಲ ಗಡ್ಡೆಕಟ್ಟುತ್ತಿದೆ" ಎಂದು ಆ ಮುಳ್ಳು ಪೊದೆ ಹೇಳಿತು.

ಆಗ ಅವಳು ಆ ಮುಳ್ಳುಪೊದೆಯನ್ನು ತನ್ನ ಎದೆಗೆ ಅವುಚಿ ಹಿಡಿದಳು. ಗಟ್ಟಿಯಾಗಿದ್ದ ಹಿಮ ಕರಗಿತು. ಮುಳ್ಳುಗಳು ಮೈಗೆ ಚುಚ್ಚಿದವು. ಹನಿಹನಿಯಾಗಿ ರಕ್ತ ಹರಿದುಬಂತು. ಆದರೆ ಮುಳ್ಳುಪೊದೆಯಲ್ಲಿ ಹೊಸ ಹಸುರು ಚಿಗುರು ಕಾಣಿಸಿಕೊಂಡಿತು. ಆ ಚಳಿಯ ರಾತ್ರಿ ಅದರಲ್ಲಿ ಹೂ ಹುಟ್ಟಿಕೊಂಡಿತು! ದುಃಖಪಡುವ ತಾಯ ಎದೆಯಲ್ಲಿ ಅಷ್ಟು ಬಿಸುಪು ತುಂಬಿದೆ! ಆಗ ಆ ಮುಳ್ಳುಪೊದೆ ಅವಳು ಅನುಸರಿಸಬೇಕಾದ ದಾರಿಯನ್ನು ತೋರಿಸಿತು. ಅದರಂತೆ ಅವಳು ಹೊರಟು, ಒಂದು ಕೊಳದ ಬಳಿಗೆ ಬಂದಳು. ಅಲ್ಲಿ ಹಡಗಾಗಲಿ ದೋಣಿಯಾಗಲಿ ಕಾಣಿಸಲಿಲ್ಲ. ಆ ಕೊಳದ ನೀರು ಮಂಜುಗಡ್ಡೆಯಾಗಿ ಹೆಪ್ಪುಗಟ್ಟಿದ್ದರೆ ಅವಳು ಅದರ ಮೇಲೆ ನಡೆದುಹೋಗಬಹುದಾಗಿತ್ತು. ಅಥವಾ ನೀರು ನೀರಾಗಿದ್ದಿದ್ದರೆ ಅದನ್ನು ಹಾಯ್ದು ಹೋಗಬಹುದಾಗಿತ್ತು. ಆದರೂ, ತನ್ನ ಮಗುವನ್ನು ಕಾಣಬೇಕಾಗಿದ್ದುದರಿಂದ, ಅವಳು ಆ ಕೊಳವನ್ನು ದಾಟಲೇಬೇಕು. ಅವಳು ಕೊಳದ ದಡದಲ್ಲಿ ಮಲಗಿ ಅದರ ನೀರನ್ನೆಲ್ಲ ಕುಡಿದುಬಿಡಲು ನೋಡಿದಳು,

ಯಾರಿಗಾದರೂ ಅದು ಅಸಾಧ್ಯವಾದ ಕಾರ್ಯವೇ! ಆದರೆ ಮಗುವನ್ನು ಕಳೆದುಕೊಂಡ ಆ ತಾಯಿ, ತನಗೆ ಏನಾದರೂ ದೈವಸಹಾಯ ಒದಗೀತೆಂದು ತಿಳಿದುಕೊಂಡಳು. ಆಗ ಆ ಕೊಳ "ನೀನು ಎಂದಿಗೂ ಇಲ್ಲಿಯ ನೀರನ್ನು ಕುಡಿದು ಮುಗಿಸಲಾರೆ. ನಾನೂ ನೀನೂ ಒಂದು ಒಪ್ಪಂದ ಮಾಡಿಕೊಳ್ಳೋಣ. ನನಗೆ ಮುತ್ತುಗಳೆಂದರೆ ಬಹಳ ಇಷ್ಟ. ನಿನ್ನ ಕಣ್ಣುಗಳಂತಹ ಶುಭ್ರವಾದ ಮುತ್ತುಗಳನ್ನು ನಾನು ಇದುವರೆಗೂ ನೋಡಿಲ್ಲ. ನೀನು ಅತ್ತೂ ಅತ್ತೂ ನಿನ್ನ ಕಣ್ಣುಗಳನ್ನು ಈ ನನ್ನ ನೀರಿನಲ್ಲಿ ಸೇರಿಸಿಬಿಟ್ಟರೆ, ನಾನು ನಿನ್ನನ್ನು ಮೃತ್ಯುವಿನ ಮನೆಗೆ ಕರೆದುಕೊಂಡು ಹೋಗುತ್ತೇನೆ. ಆ ಮನೆಯಲ್ಲಿ ಅವನು ಹೂಗಳನ್ನೂ ಮರಗಳನ್ನೂ ಬೆಳೆಸುತ್ತಾನೆ. ಅವುಗಳಲ್ಲಿ ಒಂದೊಂದೂ ಒಂದೊಂದು ಮಾನವ ಜೀವ" ಎಂದಿತು.

"ಓ! ನನ್ನ ಮಗುವನ್ನು ಮುಟ್ಟುವುದಕ್ಕಾಗಿ ನಾನು ಏನನ್ನಾದರೂ ಕೊಟ್ಟೇನು?" ಎಂದು ಆ ತಾಯಿ, ಮೊದಲೇ ಅಳುತ್ತಿದ್ದಳು, ತನ್ನ ಕಣ್ಣುಗಳೆರಡೂ ಕರಗಿ ಕೊಳದಲ್ಲಿ ಕಳಚಿ ಸೇರುವವರೆಗೂ ಅತ್ತಳು. ಆ ಕಣ್ಣುಗಳು ಅನರ್ಘ್ಯವಾದ ಎರಡು ಮುತ್ತುಗಳಾದವು.

ಆಗ ಕೊಳ ಅವಳನ್ನು ಎತ್ತಿಕೊಂಡು, ಉಯ್ಯಾಲೆಯಲ್ಲಿ ತೂಗುವಂತೆ ತೂಗಿ, ಆಚೆಯ ದಡದಲ್ಲಿ ಇಳಿಸಿತು. ಅಲ್ಲಿ ಅನೇಕ ಮೈಲಿಗಳು ಉದ್ದವಾದ ಒಂದು ಅದ್ಭುತವಾದ ಕಟ್ಟಡವಿತ್ತು. ಅದೇನು ಕಾಡುಗಳಿಂದಲೂ ಗುಹೆಗಳಿಂದಲೂ ತುಂಬಿದ ಪರ್ವತವೋ, ಅಥವಾ ಅದನ್ನು ಹಾಗೆಯೇ ಕಟ್ಟಿದ್ದರೋ ಯಾರಿಗೂ ತಿಳಿಯದು. ಆದರೆ, ಪಾಪ, ಆ ತಾಯಿಗೆ ಕಣ್ಣು ಕಾಣಿಸದು—ಅವಳ ಕಣ್ಣುಗಳು ಎರಡೂ ಕೊಳದಲ್ಲಿ ಮುತ್ತುಗಳಾಗಿದ್ದುವು.

"ಅಯ್ಯೋ, ಮೃತ್ಯುವಿನ ಮನೆಯೆಲ್ಲಿ?" ಎಂದು ಆ ತಾಯಿ ಮೊರೆಯಿಟ್ಟಳು.

ಅಲ್ಲಿ ಮೃತ್ಯುವಿನ ಮನೆಯಲ್ಲಿ, ಗಿಡಗಳಿಗೆ ನೀರು ಎರೆಯುತ್ತಿದ್ದ ಒಬ್ಬಳು ಬಿಳಿಕೂದಲ ಮುದುಕಿ "ಅವನು ಇನ್ನೂ ಮನೆಗೆ ಬಂದಿಲ್ಲ. ನಿನಗೆ ಇಲ್ಲಿಗೆ ದಾರಿ ಹೇಗೆ ಗೊತ್ತಾಯಿತು? ನಿನಗೆ ಸಹಾಯಮಾಡಿದವರು ಯಾರು?" ಎಂದಳು.

"ದೇವರು ನನಗೆ ಸಹಾಯ ಮಾಡಿದ. ಆತ ದಯಾಮಯ. ನೀನು ಕೂಡ ದಯೆ ತೋರಲಾರೆಯಾ? ನನ್ನ ಮಗು ನನಗೆಲ್ಲಿ ಸಿಕ್ಕು ವುದು?" ಎಂದು ಆ ತಾಯಿ ಕೇಳಿದಳು.

"ಆ ಮಗು ನನಗೆ ತಿಳಿಯದು. ನಿನಗೋ ಕಣ್ಣಿಲ್ಲ. ಈ ರಾತ್ರಿ ಇಲ್ಲಿ ಅನೇಕ ಹೂವುಗಳೂ ಗಿಡಗಳೂ ಬಾಡಿಹೋಗಿವೆ. ಅವುಗಳನ್ನು ಬೇರೆ ಕಡೆ ನೆಡುವುದಕ್ಕಾಗಿ ಇಷ್ಟರಲ್ಲಿಯೇ ಮೃತ್ಯು ಬರುತ್ತಾನೆ. ಪ್ರತಿ ಯೊಂದು ಮನುಷ್ಯಜೀವಿಗೂ ಒಂದೊಂದು ಜೀವವೃಕ್ಷವಾಗಲಿ ಜೀವ ಪುಷ್ಪವಾಗಲಿ ಇಲ್ಲಿ ನಿಯಮಿತವಾಗಿದೆಯೆಂಬುದನ್ನು ನೀನು ತಿಳಿದಿರ ಬಹುದು. ಇವು ಎಲ್ಲವೂ ಮಿಕ್ಕ ವೃಕ್ಷಗಳಂತೆಯೇ ಕಾಣುತ್ತವೆ; ಆದರೂ ಪ್ರತಿಯೊಂದರಲ್ಲೂ ಒಂದು ಹೃದಯ ಮಿಡಿಯುತ್ತದೆ. ಮಕ್ಕಳ ಹೃದಯ ಗಳು ಕೂಡ ಮಿಡಿಯುತ್ತವೆ; ಆ ಗುರುತಿನಿಂದ ನಿನಗೆ ನಿನ್ನ ಮಗು ಗೊತ್ತಾಗಬಹುದು. ಆದರೆ, ನೀನು ಮುಂದೆ ಏನು ಮಾಡಬೇಕೆಂಬುದನ್ನು ನಾನು ನಿನಗೆ ತಿಳಿಸಿದರೆ, ನನಗೇನು ಕೊಡುತ್ತೀಯೆ?" ಎಂದು ಆ ಮುದುಕಿ ಕೇಳಿದಳು.

"ಕೊಡಲು ನನ್ನ ಹತ್ತಿರ ಏನೂ ಇಲ್ಲವಲ್ಲ. ಆದರೆ ನಿನಗಾಗಿ ಪ್ರಪಂಚದ ಕೊನೆಗಳಿಗೆ ಬೇಕಾದರೂ ನಾನು ಹೋಗಿ ಬರುತ್ತೇನೆ" ಎಂದಳು ಆ ತಾಯಿ.

"ಪ್ರಪಂಚದ ಕೊನೆಯಲ್ಲಿ ನನಗೆ ಏನು ಕೆಲಸ? ಆದರೆ, ನಿನ್ನ ತಲೆಯ ಕರಿಯ ಕೂದಲನ್ನು ನೀನು ನನಗೆ ಕೊಡಬಹುದು. ಅದು ಎಷ್ಟು ಸುಂದರವಾಗಿದೆಯೆಂದು ನೀನು ಬಲ್ಲೆ. ನನಗೆ ಅದರ ಮೇಲೆ ಇಷ್ಟ. ನಿನಗೆ ಬೇಕಾದರೆ ನನ್ನ ತಲೆಯ ಬಿಳಿ ಕೂದಲನ್ನು ಬದಲಾಗಿ ಕೊಡುತ್ತೇನೆ" ಎಂದು ಮುದುಕಿ ಹೇಳಿದಳು.

ಅದಕ್ಕೆ ಆ ತಾಯಿ "ಅಯ್ಯೋ, ಇಷ್ಟೇನೆ! ಇದೊ, ಪರಮಸಂತೋಷ ದಿಂದ ಕೊಟ್ಟೆ" ಎಂದಳು.

ಅವಳು ಆ ಮುದುಕಿಗೆ ತನ್ನ ಚೆಲುವಾದ ತಲೆಗೂದಲನ್ನು ಕೊಟ್ಟು, ಅವಳ ಬಿಳಿಯ ಕುರುಳನ್ನು ಕೊಂಡಳು. ಬಳಿಕ ಅವರಿಬ್ಬರೂ ಮೃತ್ಯು ವಿನ ಮನೆಯೊಳಕ್ಕೆ ಹೋದರು. ಅಲ್ಲಿ ಹೂವುಗಳೂ ಗಿಡಗಳೂ ಸಮೃದ್ಧ

ಯಾಗಿ ಬೆಳೆದಿದ್ದುವು. ಕೆಲವು ಕಡೆ ಎಳೆಯ ಸಸಿಗಳು, ಕೆಲವು ಕಡೆ ಬಲಿತ ಮರಗಳು. ಇನ್ನೂ ಕೆಲವು ಬೆಳವಣಿಗೆ ಸಾಲದೆಂಬಂತೆ ಇದ್ದುವು. ತೆಂಗು, ಆಲ, ಅಶ್ವತ್ಥ, ಬಾಳೆ, ಮಾವು ಮುಂತಾದ ತರತರದ ಮರಗಳು ಅಲ್ಲಿದ್ದುವು. ಪ್ರತಿ ಮರಕ್ಕೂ ಪ್ರತಿ ಹೂವಿಗೂ ಒಂದೊಂದು ಹೆಸರು. ಪ್ರತಿಯೊಂದೂ ಒಂದೊಂದು ಮನುಷ್ಯಜೀವದ ಪ್ರತಿನಿಧಿ. ಕೆಲವು ದೊಡ್ಡ ದೊಡ್ಡ ಮರಗಳನ್ನು ಸಣ್ಣಸಣ್ಣ ಮಡಕೆಗಳಲ್ಲಿ ಹೂತಿಟ್ಟಿದ್ದರು. ಅಲ್ಲಿ ಸ್ಥಳ ಸಾಕಾಗದೆ, ಮಡಕೆ ಒಡೆದುಹೋಗುವುದೋ ಎನ್ನುವ ಹಾಗಿತ್ತು. ಆದರೆ ಮುಟ್ಟಿದರೆ ಮಾಸಿಹೋಗುವಂತಹ ಅನೇಕ ಹೂವುಗಳನ್ನು ಸಾರ ವತ್ತಾದ ನೆಲದಲ್ಲಿ ನೆಟ್ಟು, ಅದನ್ನು ಬಹಳ ಜೋಪಾನವಾಗಿ ಪಾಲಿಸು ತ್ತಿದ್ದರು. ಮಗುವನ್ನು ಕಳೆದುಕೊಂಡು ಶೋಕಪಡುತ್ತಿದ್ದ ಆ ತಾಯಿ ಆ ಸಣ್ಣಸಣ್ಣ ಸಸಿಗಳ ಮೇಲೆ ಬಾಗಿ ಕಿವಿಗೊಟ್ಟು ಕೇಳಿದಳು. ಒಂದೊಂದ ರಲ್ಲೂ ಒಂದೊಂದು ಮಾನವ ಹೃದಯ ತುಡಿದುಕೊಳ್ಳುತ್ತಿತ್ತು. ಅಲ್ಲಿ ತುಡಿದುಕೊಳ್ಳುತ್ತಿದ್ದ ಕೋಟ್ಯನುಕೋಟಿ ಹೃದಯಗಳ ನಡುವೆ ತನ್ನ ಮಗುವಿನ ಹೃದಯದ ಮಿಡಿತ ಯಾವುದೆಂಬುದನ್ನು ಆ ತಾಯಿ ಗುರುತಿಸಿದಳು.

ಎದ್ದು ನಿಲ್ಲಲಾರದೆ ಮುಖ ಕೆಳಗೆ ಮಾಡಿಕೊಂಡು ಜೋತು ಬಿದ್ದಿದ್ದ ಒಂದು ಹೂವಿನ ಕಡೆಗೆ ಕೈನೀಡಿ, "ಇದೇ! ಇದೇ!" ಎಂದಳು.

"ಹೂವನ್ನು ಕೈಯಿಂದ ಮುಟ್ಟಬೇಡ" ಎಂದು ಆ ಮುದುಕಿ ಕೂಗಿ ಕೊಂಡಳು. "ನೀನು ಅಲ್ಲಿಯೇ ನಿಂತುಕೊ. ಇನ್ನೇನು ಮೃತ್ಯು ಬರುವ ಹೊತ್ತು. ಅವನು ಬಂದಾಗ, ಆ ಹೂಗಿಡವನ್ನು ಕೀಳುವುದಕ್ಕೆ ಅವನಿಗೆ ಅವಕಾಶ ಕೊಡಬೇಡ. ಅವನು ಇದನ್ನು ಕಿತ್ತರೆ, ಮಿಕ್ಕವುಗಳನ್ನೂ ಹಾಗೆಯೇ ನಾನೂ ಕಿತ್ತುಹಾಕಿಬಿಡುವೆನೆಂದು ಅವನನ್ನು ಹೆದರಿಸು. ಆಗ ಅವನಿಗೆ ಭಯ ಹುಟ್ಟುತ್ತದೆ. ಏಕೆಂದರೆ ಇಲ್ಲಿಯ ಪ್ರತಿ ಹೂವಿಗೂ ಪ್ರತಿ ಗಿಡಕ್ಕೂ ಅವನು ದೇವರಿಗೆ ಲೆಕ್ಕ ಒಪ್ಪಿಸಬೇಕು. ದೇವರು ಅಪ್ಪಣೆ ಕೊಟ್ಟ ಹೊರತು, ಯಾವುದನ್ನೂ ಅವನು ಕಿತ್ತು ಎತ್ತುವಂತಿಲ್ಲ.

ಆಗ ಆ ಮನೆಯೊಳಕ್ಕೆ ಕೊರೆಯುವ ಚಳಿಗಾಳಿಯೊಂದು ಭರ್ರನೆ

ಬೀಸಿ ಬಂತು. ಮೃತ್ಯು ಮನೆಗೆ ಬಂದನೆಂದು ಆ ಕಣ್ಣು ಕಳೆದುಕೊಂಡ ತಾಯಿಗೆ ತಿಳಿಯಿತು.

"ನಿನಗೆ ಇಲ್ಲಿಗೆ ದಾರಿ ಹೇಗೆ ಗೊತ್ತಾಯಿತು? ನನಗಿಂತಲೂ ವೇಗ ವಾಗಿ ಇಲ್ಲಿಗೆ ಬಂದು ಸೇರುವುದು ನಿನಗೆ ಹೇಗೆ ಸಾಧ್ಯವಾಯಿತು?" ಎಂದು ಮೃತ್ಯು ಕೇಳಿದನು.

"ನಾನು ತಾಯಿ" ಎಂದಳು ಆ ತಾಯಿ.

ಮೃತ್ಯು ಅವಳ ಬಳಿಯಲ್ಲಿದ್ದ ಆ ಕೋಮಲವಾದ ಹೂಗಿಡದ ಕಡೆಗೆ ಕೈನೀಡಿದ. ಆದರೆ ಅವಳು ಅದರ ಒಂದು ಎಲೆಗೂ ತನ್ನ ಕೈ ಸೋಕದಷ್ಟು ಎಚ್ಚರದಿಂದ ಅದರ ಸುತ್ತ ತಾನು ಕೈ ಚಾಚಿಕೊಂಡು ಅದನ್ನು ರಕ್ಷಿಸು ತ್ತಿದ್ದಳು. ಆಗ ಮೃತ್ಯು ಅವಳ ಕೈಗಳ ಮೇಲೆ ತನ್ನ ಕೊರೆಯುವ ಚಳಿ ಯುಸಿರನ್ನು ಊದಿದನು. ಆ ಕೊರೆತದಿಂದ ಅವಳ ಕೈಗಳು ಸೆಡೆತು ನಿಶ್ಶಕ್ತವಾದವು.

"ನೀನು ನನ್ನನ್ನು ಎದುರಿಸಿ ಗೆಲ್ಲಲಾರೆ" ಎಂದನು ಮೃತ್ಯು.

"ದೇವರ ದಯೆಯಿದ್ದರೆ ಅದು ಸಾಧ್ಯ" ಎಂದಳು ಆ ತಾಯಿ.

"ನಾನು ದೇವರ ಸಂಕಲ್ಪದಂತೆ ಮಾತ್ರ ನಡೆಯುತ್ತಿದ್ದೇನೆ. ನಾನು ಅವನ ತೋಟಗಾರ. ಅವನ ತೋಟದ ಹೂಗಿಡಗಳನ್ನು ನಾನು ಒಂದು ಲೋಕದಿಂದ ಕಿತ್ತು ಇನ್ನೊಂದು ಲೋಕದಲ್ಲಿ ನೆಡುತ್ತೇನೆ. ಅಲ್ಲಿ ಅವು ಹೇಗೆ ಬೆಳೆಯುತ್ತವೆ, ಆ ತೋಟ ಹೇಗಿರುತ್ತದೆ ಎಂಬುದನ್ನು ನಾನು ನಿನಗೆ ಹೇಳಬಾರದು" ಎಂದು ಮೃತ್ಯು ಹೇಳಿದ.

ಆ ತಾಯಿ ಅಳುತ್ತ, "ನನ್ನ ಮಗುವನ್ನು ನನಗೆ ಹಿಂದಿರುಗಿ ಕೊಡು" ಎಂದು ಬೇಡಿದಳು. ಎರಡು ಚೆಲುವಾದ ಹೂಗಳನ್ನು ಕೈಯಿಂದ ಹಿಡಿದು, "ನಿನ್ನ ಹೂವುಗಳೆಲ್ಲವನ್ನೂ ಕಿತ್ತು ಎಸೆದುಬಿಡುತ್ತೇನೆ. ನನ್ನ ಬುದ್ಧಿ ನನ್ನ ಸ್ವಾಧೀನದಲ್ಲಿ ಇಲ್ಲ" ಎಂದಳು.

"ಅವುಗಳನ್ನು ಮುಟ್ಟಬೇಡ" ಎಂದು ಮೃತ್ಯು ಕೂಗಿಕೊಂಡನು. "ನಿನಗೆ ಬಹು ದುಃಖವಾಗಿದೆಯೆಂದು ಹೇಳುತ್ತೀಯೆ. ಇನ್ನೊಬ್ಬ ತಾಯಿಗೂ ನಿನ್ನಂತೆ ದುಃಖವನ್ನು ಉಂಟುಮಾಡಲು ನಿನಗೆ ಇಷ್ಟವೇನು?" ಎಂದನು.

"ಯಾರು ? ಇನ್ನೊಬ್ಬ ತಾಯಿಯೇ ! " ಎಂದು, ಆ ತಾಯಿ ತಾನು ಕೀಳಬೇಕೆಂದು ಕೈಹಾಕಿದ್ದ ಹೂಗಳನ್ನು ಬಿಟ್ಟುಬಿಟ್ಟಳು.

ಆಗ ಮೃತ್ಯು "ಇಗೋ, ನಿನ್ನ ಕಣ್ಣು. ನಾನು ಇವುಗಳನ್ನು ನಿನಗಾಗಿ ಆ ಕೊಳದ ಅಡಿಯಿಂದ ಎತ್ತಿ ತಂದಿದ್ದೇನೆ. ಅಲ್ಲಿ ಇವು ಮುತ್ತಿನಂತೆ ಹೊಳೆಯುತ್ತಿದ್ದುವು. ಇವು ನಿನ್ನವೆಂದು ನನಗೆ ಗೊತ್ತಿರಲಿಲ್ಲ. ಇಗೋ, ತೆಗೆದುಕೊ. ಇವು ಮೊದಲಿಗಿಂತ ಸ್ವಚ್ಛವಾಗಿವೆ. ತೆಗೆದುಕೊಂಡು, ಇದೋ ಇಲ್ಲಿರುವ ಈ ಆಳವಾದ ಬಾವಿಯಲ್ಲಿ ನೋಡು. ನೀನು ಈಗ ಕಿತ್ತುಹಾಕಲು ಬಯಸಿದ ಎರಡು ಹೂವುಗಳ ಹೆಸರುಗಳನ್ನು ತಿಳಿಸುತ್ತೇನೆ. ಆ ಹೂವುಗಳು ಯಾರ ಜೀವಗಳಿಗೆ ಪ್ರತಿನಿಧಿಗಳಾಗಿವೆಯೋ ಅವುಗಳ ಭವಿಷ್ಯವನ್ನು ನೋಡು. ನೀನು ಯಾವುದರ ಬೆಳೆವಣಿಗೆಯನ್ನು ಅಡ್ಡಿಮಾಡಿ, ಯಾವುದನ್ನು ನಾಶಮಾಡಿಬಿಡುತ್ತಿದ್ದೆಯೋ ನೋಡು" ಎಂದನು.

ಆಗ ಅವಳು ಬಾವಿಯ ಒಳಗೆ ನೋಡಿದಳು. ಒಳಗೆ ಎಂಥ ದಿವ್ಯವಾದ ದೃಶ್ಯ! ಒಂದು ಜೀವ ಜಗತ್ತಿಗೆಲ್ಲಾ ಕಲ್ಯಾಣವನ್ನು ಉಂಟುಮಾಡುತ್ತಿತ್ತು. ಅದರಿಂದ ಎಲ್ಲೆಲ್ಲಿಯೂ ಹಿತಸಾಧನೆಯಾಗುತ್ತಿತ್ತು. ಇನ್ನೊಂದು ಜೀವ ದಾರಿದ್ರ್ಯದಲ್ಲಿ, ದುಃಖದಲ್ಲಿ ಬಿದ್ದು ಒದ್ದಾಡುತ್ತಿತ್ತು.

"ಎರಡೂ ದೇವರ ಸಂಕಲ್ಪ" ಎಂದ ಮೃತ್ಯು.

"ಈ ದುಃಖದ ಪುಷ್ಪ ಯಾವುದು ? ಈ ಸುಖದ ಪುಷ್ಪ ಯಾವುದು ? ಹೇಳು" ಎಂದಳು ಆ ತಾಯಿ.

"ಅದನ್ನು ನಾನು ನಿನಗೆ ಹೇಳಬಾರದು. ಆದರೆ ನೀನು ಇಷ್ಟು ತಿಳಿಯಬಹುದು. ಅವುಗಳಲ್ಲಿ ಒಂದು ನಿನ್ನ ಮಗುವಿನದು, ಅದು ನಿನ್ನ ಮಗುವಿನ ಅದೃಷ್ಟ, ನಿನ್ನ ಮಗುವಿನ ಭವಿಷ್ಯ."

ಆಗ ಆ ತಾಯಿ ಭಯದಿಂದ ಚೀರಿ, "ಹೂಗಳಲ್ಲಿ ನನ್ನ ಮಗುವಿನದು ಯಾವುದು ? ನನಗದನ್ನು ಹೇಳು. ಆ ನತದೃಷ್ಟ ಮಗುವಿಗೆ ಮುಕ್ತಿ ಕೊಡು. ಆ ಮಹಾ ದುಃಖದಿಂದ ಅದನ್ನು ಪಾರುಮಾಡು. ಅದನ್ನು ನೀನು ಕೊಂಡುಹೋದರೂ ಸರಿಯೆ, ಅದನ್ನು ದೇವರ ರಾಜ್ಯಕ್ಕೆ ಒಯ್ದುಕೋ. ನನ್ನ ಗೋಳಿಗೆ ಕರಗಬೇಡ. ನಾನು ಹಲುಬಿದರೆ ಕಿವಿ ಕೊಡಬೇಡ. ನಾನು ಹೇಳಿದುದನ್ನೆಲ್ಲ ಮರೆತುಬಿಡು.

"ನಿನ್ನ ಮಾತೇ ನನಗೆ ಅರ್ಥವಾಗುವುದಿಲ್ಲವಲ್ಲ" ಎಂದ ಮೃತ್ಯು. "ನಿನ್ನ ಮಗುವನ್ನು ನೀನು ಹಿಂದಕ್ಕೆ ಒಯ್ಯುವೆಯೊ? ಅಥವಾ ನೀನು ಕಂಡರಿಯದ ಸ್ಥಳಕ್ಕೆ ನಾನು ಅದನ್ನು ಕೊಂಡೊಯ್ಯಲೊ?"

ಆಗ ಆ ತಾಯಿ ಕೈಕೈ ಹಿಸುಕಿಕೊಂಡು, ಮೊಣಕಾಲೂರಿ ದೈನ್ಯದಿಂದ "ದೇವರೇ, ದೇವರೇ! ನನ್ನ ಪ್ರಾರ್ಥನೆಗಳು ನಿನ್ನ ಸಂಕಲ್ಪಕ್ಕೆ ವಿರುದ್ಧವಾದಾಗ, ಅವುಗಳನ್ನು ನೀನು ಕರುಣಿಸಬೇಡ. ನಿನ್ನ ಸಂಕಲ್ಪಗಳೇ ಸದಾ ಕಾಲದಲ್ಲಿಯೂ ಅತ್ಯುತ್ತಮವಾದ ವರಗಳು. ಓ, ನನ್ನ ಪ್ರಾರ್ಥನೆಗೆ ನೀನು ಕರಗಬೇಡ" ಎಂದು ಮೊರೆಯಿಟ್ಟಳು. ಅವಳ ತಲೆ ಅವಳ ಎದೆಯ ಮೇಲೆ ಕುಸಿಯಿತು.

ಆಗ ಮೃತ್ಯು ಆ ತಾಯಿಯ ಮಗುವನ್ನು ಯಾರೂ ಕಂಡರಿಯದ ನಾಡಿಗೆ ಕೊಂಡೊಯ್ದು ಹೋದನು.

# ಚೆಂಡು ಬುಗುರಿ

ಒಂದು ಬುಗುರಿ, ಒಂದು ಚೆಂಡು ಇತರ ಆಟದ ಸಾಮಾನುಗಳ ಜೊತೆಯಲ್ಲಿ ಒಂದು ಪೆಟ್ಟಿಗೆಯೊಳಗೆ ಇತ್ತು. ಒಂದು ಸಲ ಬುಗುರಿ ಚೆಂಡನ್ನು ಕುರಿತು "ನಾವಿಬ್ಬರೂ ಒಂದೇ ಪೆಟ್ಟಿಗೆಯಲ್ಲಿ ಇದ್ದೇವೆ. ನಾವು ಏಕೆ ಮದುವೆಯಾಗಬಾರದು?" ಎಂದಿತು.

ಆದರೆ ಆ ಚೆಂಡು, ಹೊಳೆಹೊಳೆಯುವ ಚರ್ಮದ ಹೊದಿಕೆಯಿದ್ದುದರಿಂದ, ತಾನು ಪ್ರಪಂಚದಲ್ಲಿ ಯಾವ ಹುಡುಗಿಗೂ ಕಡಿಮೆಯಲ್ಲವೆಂದು ಹೆಮ್ಮೆಪಡುತ್ತಿತ್ತು. ಬುಗುರಿಯ ಮಾತಿಗೆ ಅದು ಉತ್ತರ ಕೂಡ ಅನುಗ್ರಹಿಸಲಿಲ್ಲ.

ಮಾರನೆಯ ದಿನ ಒಬ್ಬ ಹುಡುಗ ಓಡಿಬಂದ. ಆ ಆಟದ ಸಾಮಾನುಗಳೆಲ್ಲ ಅವನವೇ. ಅವನು ಆ ಬುಗುರಿಗೆ ಕೆಂಪು ಬಣ್ಣವನ್ನು ಬಳಿದ, ಹಳದಿಯ ಬಣ್ಣವನ್ನು ಬಳಿದ. ಅದರ ಕಬ್ಬಿಣದ ಮೊಳೆಯನ್ನು ಕಿತ್ತು, ಅದಕ್ಕೆ ಒಂದು ಹಿತ್ತಾಳೆಯ ಮೊಳೆ ಹಾಕಿದ. ಬುಗುರಿ ತಿರುಗುವಾಗ ಅದರ ಬಣ್ಣ ಭರ್ಜರಿಯಾಗಿತ್ತು.

ಬುಗುರಿ ಚೆಂಡನ್ನು ಕುರಿತು "ನನ್ನನ್ನು ನೋಡು. ಈಗೇನು ಹೇಳುತ್ತೀಯೆ? ನನ್ನನ್ನು ಮದುವೆ ಮಾಡಿಕೊಳ್ಳುತ್ತೀಯ? ನಮುಗಿಬ್ಬರಿಗೂ ಸಾಮ್ಯ ಚೆನ್ನಾಗಿದೆ. ನೀನು ಪುಟ ಹಾರುತ್ತೀಯೆ, ನಾನು ನರ್ತನ ಮಾಡುತ್ತೇನೆ, ನಮಗಿಂತ ಒಳ್ಳೆಯ ಜೋಡಿ ಭೂಮಿಯಲ್ಲೇ ಇಲ್ಲ" ಎಂದಿತು.

"ಓಹೊ! ಹಾಗೇನು! ಬಹುಶಃ ನಿನಗೆ ಗೊತ್ತಿಲ್ಲವೇನೊ! ಮಹಾರಾಜನ ಮನೆಯ ಜವಾನನ ಚರ್ಮದ ಪಾದರಕ್ಷೆಗಳಿಂದ ನಾನು ಜನ್ಮ

ತಾಳಿದೆ! ನನ್ನ ಮೈ ತುಂಬ ಒಳ್ಳೆಯ ಚಿನ್ನದ ಬಣ್ಣದ ಬೆಂಡು ತುಂಬಿದೆ! ನಾನೇನು ಸಾಮಾನ್ಯವಲ್ಲ!" ಎಂದಿತು ಚೆಂಡು.

"ಹೌದು, ಹೌದು. ಆದರೆ ನಾನೂ ಒಳ್ಳೆಯ ಕರಿಯ ಮರದಿಂದಲೇ ಹುಟ್ಟಿದವನು. ಮುಖ್ಯ ಮಂತ್ರಿ ತಾನೇ ತನ್ನ ಕೈಯಾರೆ ನನ್ನನ್ನು ಕಡೆದು, ಮೊಳೆಯನ್ನು ಮೊನೆ ಮಾಡಿದ" ಎಂದಿತು ಬುಗುರಿ.

"ಏನೇನು! ಈ ಮಾತು ನಿಜವೆ?" ಎಂದಿತು ಚೆಂಡು.

"ಇದು ಸುಳ್ಳಾದರೆ, ಪುನಃ ಯಾರೂ ಎಂದಿಗೂ ನನ್ನನ್ನು ಚಾಟಿಯಿಂದ ಆಡಿಸುವುದು ಬೇಡ" ಎಂದಿತು ಬುಗುರಿ.

"ನಿನ್ನ ಮಾತುಗಳೇನೊ ಕಿವಿಗೆ ಚೆನ್ನಾಗಿವೆ. ಆದರೆ ನಿನ್ನನ್ನು ನಾನು ಮದುವೆಯಾಗಲಾರೆ. ನಾನು ಒಂದು ಗುಬ್ಬಚ್ಚಿಗೆ ಮಾತು ಕೊಟ್ಟಿದ್ದೇನೆ. ನಾನು ಪ್ರತಿಯೊಂದು ಸಲ ಪುಟ ನೆಗೆದು ಮೇಲೆ ಹಾರಿದಾಗಲೂ ಅದು ಗೂಡಿನಿಂದ ಹೊರಗೆ ತಲೆ ಹಾಕಿ, 'ಮದುವೆಯಾಗುವೆಯಾ?' ಎನ್ನುತ್ತದೆ. ನಾನು 'ಆಗಲಿ' ಎಂದು ಮಾತು ಕೊಟ್ಟಿದ್ದೇನೆ. ಹಾಗೆಂದು ಬಾಯಿಂದ ಹೇಳದಿದ್ದರೂ ಮನಸ್ಸಿನಲ್ಲಿ ಎಂದುಕೊಂಡಿದ್ದೇನೆ. ಮನಸ್ಸಿನಲ್ಲಿ ಎಂದುಕೊಂಡರೆ ಮುಕ್ಕಾಲು ಕೆಲಸ ಆದ ಹಾಗೆ ತಾನೆ. ಆದರೂ, ನಿನ್ನನ್ನು ನಾನು ಎಂದಿಗೂ ಮರೆಯುವುದಿಲ್ಲವೆಂದು ಭರವಸೆ ಕೊಡುತ್ತೇನೆ."

"ಅದರಿಂದ ನನಗೇನು ಬಂದ ಹಾಗಾಯಿತು?" ಎಂದು ಹೇಳಿ, ಆ ಬುಗುರಿ ಸುಮ್ಮನಾಯಿತು. ಅಲ್ಲಿಂದ ಆಚೆ ಅವು ಎರಡೂ ಒಂದನ್ನು ಒಂದು ಮಾತನಾಡಿಸಲಿಲ್ಲ.

ಮಾರನೆಯ ದಿವಸ ಹುಡುಗ ಚೆಂಡನ್ನು ಹೊರಗೆ ತೆಗೆದುಕೊಂಡು ಹೋದ. ಅದು ಪುಟವೆದ್ದು, ಹಕ್ಕಿಯಂತೆ ಹಾರಿ, ಕಣ್ಮರೆಯಾಗುವಷ್ಟು ಎತ್ತರ ಹೋಗುತ್ತಿದ್ದುದನ್ನು ಬುಗುರಿ ಕಂಡಿತು. ಪ್ರತಿಸಲ ಅದು ಹಿಂದಿರುಗಿ ಬಂದಾಗಲೂ, ನೆಲಕ್ಕೆ ತಗುಲಿ, ಮೊದಲಿಗಿಂತ ಎತ್ತರ ನೆಗೆದು ಹೋಗುತ್ತಿತ್ತು. ಅದೇನು ಮೇಲಕ್ಕೆ ಹಾರಲು ಬಯಸಿ ಹೋಗುತ್ತಿತ್ತೋ, ಅಥವಾ ಅದರ ಒಳಗೆ ಬೆಂಡು ಇದ್ದುದರಿಂದ ಹಾಗೆ ಹಾರುತ್ತಿತ್ತೋ

ದೇವರಿಗೆ ಗೊತ್ತು. ಆದರೆ ಅದು ಒಂಬತ್ತನೆಯ ಸಲ ಪುಟ ಹಾರಿದಾಗ, ಪುನಃ ಹಿಂದಿರುಗಿ ಬರಲಿಲ್ಲ. ಹುಡುಗ ಅದಕ್ಕಾಗಿ ಎಲ್ಲೆಲ್ಲಿಯೂ ಹುಡುಕಿದ. ಅವನ ಶ್ರಮವೆಲ್ಲ ವ್ಯರ್ಥವಾಯಿತು. ಅದು ಸಿಕ್ಕಲೇ ಇಲ್ಲ. ಹೋಯಿತು.

ಬುಗುರಿ ಮಾತ್ರ "ಅದು ಎಲ್ಲಿದೆಯೆಂದು ನನಗೆ ಗೊತ್ತು. ಅದು ಗುಬ್ಬಚ್ಚಿಯ ಗೂಡಿನಲ್ಲಿ, ಆ ಗುಬ್ಬಚ್ಚಿಯನ್ನು ಮದುವೆ ಮಾಡಿಕೊಂಡು ನಿಂತುಬಿಟ್ಟಿದೆ" ಎಂದು ನಿಟ್ಟುಸಿರು ಬಿಟ್ಟಿತು.

ಬುಗುರಿ ಆ ವಿಷಯವನ್ನು ಕುರಿತು ಚಿಂತಿಸಿದಷ್ಟೂ ಅದಕ್ಕೆ ಚೆಂಡಿನ ಮೇಲಿದ್ದ ಪ್ರೇಮ ಹೆಚ್ಚಾಯಿತು. ಆ ಚೆಂಡು ಅದಕ್ಕೆ ಸಿಕ್ಕದೆ ಹೋದುದರಿಂದಲೇ ಅದರ ಕೊರಗು ಇನ್ನೂ ಹೆಚ್ಚಾಯಿತು. ಗುಬ್ಬಚ್ಚಿಗೆ ಅದು ಸಿಕ್ಕಿತೆಂದು ತಿಳಿದುಕೊಂಡು ಅದರ ದುಃಖ ಮತ್ತೂ ಹೆಚ್ಚಾಯಿತು. ಬುಗುರಿ ಅದನ್ನೇ ನೆನೆಯುತ್ತ ವೇಗವೇಗವಾಗಿ ತಿರುಗಿತು. ತಿರುಗಿದಷ್ಟೂ ತೀವ್ರವಾಗಿ ಕೂಗಿಕೊಂಡಿತು. ಚೆಂಡನ್ನು ಕುರಿತು ಚಿಂತಿಸಿದಷ್ಟೂ ಆ ಚೆಂಡಿನ ಸಮ ಲೋಕದಲ್ಲೇ ಇಲ್ಲವೆಂದು ಆ ಬುಗುರಿಗೆ ಎನ್ನಿಸುತ್ತಿತ್ತು.

ಹೀಗೆಯೇ ಹಲವು ವರ್ಷಗಳು ಕಳೆದುವು. ಬರುತ್ತ ಬರುತ್ತ ಬುಗುರಿಯ ಪ್ರೇಮದ ಕಾವು ಕಡಮೆಯಾಗುತ್ತ ಬಂತು. ಬುಗುರಿಗಾದರೂ ಕೂಡ, ಮೊದಲಿನ ಯೌವನ ಇರಲಿಲ್ಲ. ಆದರೆ ಒಂದು ದಿನ ಎಂದಿಗಿಂತ ಮನೋಹರವಾಗುವ ಅದೃಷ್ಟ ಅದಕ್ಕೆ ಒದಗಿತು. ಬುಗುರಿಗೆ ಚಿನ್ನದ ಬಣ್ಣ ಬಳಿದಿದ್ದರು! ಈಗ ಅದು ಚಿನ್ನದ ಬುಗುರಿಯಾಗಿತ್ತು. ಅದರ ತಿರಿತವೇನು! ಅದರ ಕುಣಿತವೇನು! ಅದರ ಗುಂಯ್ ಗಾನವೇನು! ಅದನ್ನು ನೋಡುವುದೇ ಕಣ್ಣಿಗೆ ಒಂದು ಹಬ್ಬ! ಆದರೆ ಒಂದು ದಿನ, ಆ ಬುಗುರಿ ತಿರುಗುತ್ತಾ ಕುಣಿಯುತ್ತಾ ಇದ್ದಕ್ಕಿದ್ದಂತೆಯೆ ಕಣ್ಣಿಗೆ ಕಾಣದೆ ಮಾಯವಾಯಿತು. ಎಲ್ಲೆಲ್ಲಿ ಹುಡುಕಿದರೂ ಅದು ಸಿಕ್ಕಲೇ ಇಲ್ಲ. ಅದು ಎಲ್ಲಿ ಮರೆಯಾಗಿತ್ತು ಗೊತ್ತೆ? ಜಗುಲಿಯ ಕೆಳಗೆ ಇದ್ದ ಕಸದ ತೊಟ್ಟಿಯಲ್ಲಿ ಅದು ಹೋಗಿ ಬಿದ್ದಿತ್ತು. ಅಲ್ಲಿದ್ದ ದೂಳು, ಹರಕು ಕಾಗದ, ಕಾಯಿಪಲ್ಯ, ಕಡ್ಡಿ ಕಸಗಳ ಮಧ್ಯೆ ಹೋಗಿ ಬಿದ್ದಿತ್ತು.

"ಒಳ್ಳೆಯ ಸ್ಥಳಕ್ಕೆ ಬಂದು ಸೇರಿದೆನಲ್ಲ! ನನ್ನ ಚಿನ್ನದ ಹೊದಿಕೆ ಯೆಲ್ಲ ಇಲ್ಲಿ ಹಾಳಾಗಿ ಹೋಗುತ್ತದೆ. ಅಯ್ಯೋ, ದೇವರೆ, ಎಂಥ ದರಿದ್ರ ಕೊಂಪೆಗೆ ನಾನು ಬಂದು ಸೇರಿದೆ!" ಎಂದು ಬುಗುರಿ ನೊಂದುಕೊಂಡಿತು. ಹಾಗೇ ಪಕ್ಕದಲ್ಲಿ ನೋಡಿದರೆ, ಅಲ್ಲಿದ್ದ ಬದನೆಯ ತೊಟ್ಟುಗಳ ಮಗ್ಗುಲಲ್ಲಿ ಏನೋ ಒಂದು ಹಳೆಯ ಸೇಬಿನ ಹಣ್ಣಿನಂತೆ ಗುಂಡಾದ ಪದಾರ್ಥ ಬಿದ್ದಿದ್ದುದು ಕಂಡುಬಂತು. ಆದರೆ ಅದು ಸೇಬಿನ ಹಣ್ಣಾಗಿರಲಿಲ್ಲ, ಒಂದು ಹಳೆಯ ಚೆಂಡಾಗಿತ್ತು. ಅಲ್ಲಿ ಅದು ಕಸದ ಗುಂಡಿಯಲ್ಲಿ ಬಿದ್ದು, ಮಳೆಯ ನೀರಿನಲ್ಲಿ ನೆನೆದುಹೋಗಿತ್ತು.

ಆ ಚೆಂಡು, ಹೊಸದಾಗಿ ಬಂದು ಬಿದ್ದ ಬುಗುರಿಯನ್ನು ನೋಡಿ, "ಅಬ್ಬ! ಕಡೆಗಾದರೂ ನನ್ನ ಅಂತಸ್ತಿನ ವಸ್ತು ಬಂತಲ್ಲ! ಇನ್ನು ಇದರ ಸಂಗಡವಾದರೂ ನಾನು ಮಾತನಾಡಬಹುದು" ಎಂದುಕೊಂಡು, ಆ ಬುಗುರಿಯ ಹತ್ತಿರ "ನಾನು ಚರ್ಮದಿಂದಾದ ಚೆಂಡು. ನನ್ನನ್ನು ಒಬ್ಬ ಯುವತಿ ಹೊಲಿದಳು. ನನ್ನ ಮೈತುಂಬ ಒಳ್ಳೆಯ ಬೆಂಡು ತುಂಬಿದೆ. ಈಗ ನನ್ನ ಸ್ಥಿತಿಯನ್ನು ನೋಡಿದರೆ, ಯಾರೂ ಈ ಮಾತು ನಂಬು ವುದಿಲ್ಲ. ಒಂದು ಸಲ ನನಗೂ ಒಂದು ಗುಬ್ಬಚ್ಚಿಗೂ ಮದುವೆ ನಿಶ್ಚಿತ ವಾಗಿತ್ತು. ಆದರೆ ನಾನು ಈ ತಿಪ್ಪೆಯ ತೊಟ್ಟಿಗೆ ಬಿದ್ದು, ಸುಮಾರು ಐದು ವರುಷಗಳಿಂದ ಇಲ್ಲೇ ಕೊಳೆಯುತ್ತಿದ್ದೇನೆ. ಮಳೆ ಬಿದ್ದು ಬಿದ್ದು, ನೆನೆದು ಅದ್ದಿಮುದ್ದೆಯಾಗಿದ್ದೇನೆ. ನಾನೂ ಒಂದು ಕಾಲಕ್ಕೆ ಸುಂದರ ವಾಗಿಯೇ ಇದ್ದೆ" ಎಂದು ಹೇಳಿಕೊಂಡಿತು.

ಬುಗುರಿ ಏನೂ ಹೇಳಲಿಲ್ಲ. ಸುಮ್ಮನೆ ಬಾಯಿ ಮುಚ್ಚಿಕೊಂಡು ತಾನು ಹಿಂದೆ ಪ್ರೀತಿಸುತ್ತಿದ್ದ ಚೆಂಡನ್ನು ಜ್ಞಾಪಿಸಿಕೊಂಡಿತು. ಚೆಂಡು ಆಡುತ್ತಿದ್ದ ಮಾತುಗಳನ್ನು ಕೇಳಿದಷ್ಟೂ, ತಾನು ಹಿಂದೆ ಪ್ರೀತಿಸಿದ ಚೆಂಡು ಇದೇ ಎಂದು ಬುಗುರಿಗೆ ಸ್ಪಷ್ಟವಾಯಿತು.

ಆ ತಿಪ್ಪೆ ತೆಗೆಯುವುದಕ್ಕೆ ಒಬ್ಬಳು ಆಳು ಬಂದಳು.

"ಓಹೊ! ಇಲ್ಲೊಂದು ಚಿನ್ನದ ಮುಲಾಮು ಬಳಿದ ಬುಗುರಿ!" ಎಂದು ಅವಳು ಅದನ್ನು ಎತ್ತಿಕೊಂಡಳು. ಬುಗುರಿ ಮತ್ತೆ ತಿಪ್ಪೆಯಿಂದ ಮೇಲೆ ಬಂತು, ಮಕ್ಕಳ ಕೈಯಲ್ಲಿ ನಲಿಯಿತು. ಚೆಂಡನ್ನು ಯಾರೂ

ಕೇಳುವವರೇ ಇರಲಿಲ್ಲ. ಬುಗುರಿಯಾದರೂ ತನ್ನ ಹಳೆಯ ಪ್ರೇಮವನ್ನು ಕುರಿತು ಏನೂ ಹೇಳಲಿಲ್ಲ. ಅದು ಬೇಗ ಮರೆತುಹೋಯಿತು. ಪ್ರೀತಿಯ ವಸ್ತುವಾಗಿದ್ದರೂ ಕೂಡ, ಐದು ವರ್ಷ ತಿಪ್ಪೆಯಲ್ಲಿ ಬಿದ್ದು, ನೆನೆದು ಅದ್ದಿ ಮುದ್ದೆಯಾದುದನ್ನು ಪುನಃ ತಿಪ್ಪೆಯಲ್ಲಿ ಕಂಡರೆ, ಯಾರು ತಾನೆ ಅದನ್ನು ಗಮನಿಸುತ್ತಾರೆ!

# ಸಮಾಧಿಯಾದ ಶಿಶು

ದುಃಖದ ದಿನ. ಮನೆಯಲ್ಲಿ ಗೋಳೋ ಗೋಳು. ನಾಲ್ಕು ವರುಷದ ಗಂಡುಮಗು ಸತ್ತುಹೋಗಿತ್ತು. ಆ ಮಗು ಎಂದರೆ ತಾಯಿ ತಂದೆಗೆ ಪ್ರಾಣ. ಇನ್ನೂ ಇಬ್ಬರು ಹೆಣ್ಣುಮಕ್ಕಳಿದ್ದರು. ಹಿರಿಯವಳಿಗೆ ಮದುವೆ ನಿಶ್ಚಿತವಾಗಿತ್ತು. ಇಬ್ಬರೂ ಒಳ್ಳೆಯ ಮಕ್ಕಳು, ನೋಡಿದರೆ ಸಂತೋಷ ವಾಗುತ್ತಿತ್ತು. ಆದರೆ ದಕ್ಕದೆ ಹೋದ ಮಗುವೆಂದರೆ ಪ್ರೀತಿ ಯಾವಾಗಲೂ ಹೆಚ್ಚು. ಅದರಲ್ಲೂ ಅದು ಕಡೆಯ ಮಗುವಾದರೆ, ಅದರಲ್ಲೂ ಅದು ಗಂಡುಮಗುವಾದರೆ, ಆ ದುಃಖವನ್ನು ಸಹಿಸುವುದು ಇನ್ನೂ ಕಷ್ಟ. ಆ ಅಕ್ಕಂದಿರಿಬ್ಬರಿಗೂ ದುಃಖವಾಯಿತು. ಆದರೂ ತಮ್ಮ ತಾಯಿ ತಂದೆಯರ ದುಃಖವನ್ನು ನೋಡಿ ಸಹಿಸುವುದು ಅವರಿಗೆ ಕಷ್ಟವಾಯಿತು. ತಂದೆ ದುಃಖದ ಭಾರದಿಂದ ಕುಗ್ಗಿಹೋಗಿದ್ದ. ತಾಯಿಯಂತೂ ಮುಳುಗಿಯೇ ಹೋಗಿದ್ದಳು. ಹಗಲೂ ರಾತ್ರಿ ಆ ಕಾಯಿಲೆ ಮಗುವನ್ನು ನೋಡಿಕೊಂಡು, ಅದಕ್ಕೆ ಬೇಕಾದ ಉಪಚಾರ ಮಾಡಿ, ಅದನ್ನು ತನ್ನ ದೇಹದ ಒಂದು ಅಂಗದಂತೆ ಎದೆಗೆ ಅವುಚಿಕೊಂಡಿದ್ದಳು. ಈಗ ಮಗು ಸತ್ತುಹೋಗಿದೆ, ಅದನ್ನು ಸಮಾಧಿಮಾಡಬೇಕು ಎಂಬುದು ಅವಳಿಗೆ ಅರ್ಥವೇ ಆಗದು.

ತನ್ನ ಮುದ್ದು ಮಗುವನ್ನು ದೇವರು ಕಿತ್ತುಕೊಳ್ಳಲಾರನೆಂದು ಅವಳ ಎಣಿಕೆ. ಆದರೆ ಅವಳ ನಿರೀಕ್ಷೆಗಳನ್ನೂ ನಂಬಿಕೆಗಳನ್ನೂ ಮೀರಿ ಅದು ಸಂಭವಿಸಿದಾಗ, ಮಗು ಕೈತಪ್ಪಿಹೋಯಿತೆಂದು ಖಚಿತವಾದಾಗ, ಆಕೆ ತೀವ್ರವಾದ ವೇದನೆಯಿಂದ "ದೇವರಿಗೆ ಇದು ಗೊತ್ತಿಲ್ಲ. ಆತನ ಪರವಾಗಿ ಇಲ್ಲಿಗೆ ಬಂದ ದೂತರಿಗೆ ಹೃದಯದಲ್ಲಿ ದಯೆ

ಯಿಲ್ಲ. ಅವರು ತಮ್ಮ ಇಷ್ಟಬಂದಂತೆ ವರ್ತಿಸುತ್ತಾರೆ. ತಾಯಿಯ ಪ್ರಾರ್ಥನೆಗಳು ಅವರ ಕಿವಿಗೆ ಬೀಳುವುದಿಲ್ಲ" ಎಂದಳು. ಹೀಗೆ, ತನಗೆ ಸಂಭವಿಸಿದ ಮಹಾದುಃಖದಲ್ಲಿ ಆಕೆ ದೇವರಲ್ಲಿ ನಂಬಿಕೆ ಕಳೆದುಕೊಂಡಳು. ಸಾವನ್ನೂ ಮುಂದಿನ ಗತಿಯನ್ನೂ ಕುರಿತು ಅವಳ ಮನಸ್ಸಿನಲ್ಲಿ ಭಯಂಕರವಾದ ಭಾವನೆಗಳು ಉಂಟಾದುವು. ಮನುಷ್ಯನೆಂಬುದು ಕೇವಲ ಮಣ್ಣು, ಸಾವೇ ಅವನ ಬದುಕಿಗೆ ಕೊನೆ ಎಂದು ನಂಬಲು ಆಕೆ ಪ್ರಯತ್ನಪಟ್ಟಳು.

ಆದರೆ ಈ ಸಂದೇಹಗಳಿಂದ ಅವಳಿಗೇನೂ ಅವಲಂಬನ ದೊರಕಲಿಲ್ಲ. ಅವಳ ಮನಸ್ಸಿಗೆ ಶಾಂತಿ ಸಿಕ್ಕಲಿಲ್ಲ. ಅದರ ಬದಲು ಅವಳ ನಿರಾಶೆ ಇನ್ನೂ ಹೆಚ್ಚಾಯಿತು. ರಾತ್ರಿಯಾಗುತ್ತ ಬಂದಂತೆ ಅವಳ ಅಳು ನಿಲ್ಲುತ್ತ ಬಂತು. ತನಗೆ ಉಳಿದಿದ್ದ ಇಬ್ಬರು ಹೆಣ್ಣುಮಕ್ಕಳ ಕಡೆ ಅವಳ ಗಮನ ಹೋಗಲಿಲ್ಲ. ಕಣ್ಣೀರು ಬಿಡುತ್ತಿದ್ದ ಗಂಡನನ್ನು ಕೂಡ ಆಕೆ ಲಕ್ಷಿಸಲಿಲ್ಲ. ಅವಳ ಮನಸ್ಸಿನ ತುಂಬ ಆ ಸತ್ತ ಮಗುವೇ ತುಂಬಿಕೊಂಡಿತ್ತು. ಆ ಮಗುವಿನ ಆಟಪಾಟ, ಆ ಮಗುವಿನ ಮಾತುಕತೆ ಒಂದೊಂದನ್ನೂ ಆಕೆ ನೆನೆಯುತ್ತ ಕುಳಿತಳು. ಅದೇ ಅವಳ ಪಾಲಿನ ಲೋಕವಾಗಿತ್ತು.

ರಾತ್ರಿ ಮಗುವನ್ನು ಎತ್ತಿಕೊಂಡು ಹೋಗಿ ಸಮಾಧಿಮಾಡಿ ಬಂದರು. ಬೆಳಗಿನ ವೇಳೆಗೆ ತಾಯಿ ಹೊರಗಿನ ಪ್ರಪಂಚಕ್ಕೆ ಕಣ್ತೆರೆದು, ಮಗುವನ್ನು ನೋಡಬಯಸಿದಳು. ಗಂಡ, ಕಣ್ಣೀರು ಸುರಿಸುತ್ತ "ಮಣ್ಣುಮಾಡಿ ಬಂದಾಯಿತು" ಎಂದ.

"ದೇವರಿಗೇ ನನ್ನ ಮೇಲೆ ದಯೆಯಿಲ್ಲದಿರುವಾಗ ನಿಮ್ಮಿಂದ ನಾನು ದಯೆ ನಿರೀಕ್ಷಿಸಬಹುದೆ?" ಎಂದು ಆಕೆ ನರಳುತ್ತ ಕಣ್ಣೀರಿಟ್ಟಳು.

ಏನು ಮಾಡಿದರೂ ಆಕೆಯ ಮನಸ್ಸು ಸ್ತಿಮಿತಕ್ಕೆ ಬರಲಿಲ್ಲ. ಮಕ್ಕಳು ಎದುರಿಗೆ ಕುಳಿತಿದ್ದರೂ ಅವಳ ಕಣ್ಣಿಗೆ ಗೋಚರವೇ ಆಗುತ್ತಿರಲಿಲ್ಲ. ಅವಳ ಮನಸ್ಸೆಲ್ಲ ಮನೆ ಬಿಟ್ಟು ದೂರವಾಗಿತ್ತು. ನಾವಿಕನಿಲ್ಲದೆ, ದಿಕ್ಕುತೋಚದೆ ಹಡಗು ಸಮುದ್ರದ ಮೇಲೆ ಹೊಯ್ದಾಡುವಂತೆ ಅವಳ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ಹೀಗೆಯೇ ಹಲವಾರು ದಿನ ಕಳೆಯಿತು. ಮಕ್ಕಳೂ

ಗಂಡನೂ ತೊಯ್ದ ಕಣ್ಣುಗಳಿಂದ ಆ ತಾಯನ್ನು ನೋಡಿ ಸಮಾಧಾನದ ಮಾತು ಹೇಳುವರು. ಅದು ಅವಳ ಕಿವಿಗೆ ಬೀಳುತ್ತಲೇ ಇರಲಿಲ್ಲ. ಇಷ್ಟಕ್ಕೂ, ತಮಗೇ ಸಮಾಧಾನವಿಲ್ಲದ ಅವರು ಆ ತಾಯಿಗೆ ಏನು ಸಮಾಧಾನ ಹೇಳಿಯಾರು? ಅವಳು ನಿದ್ರೆ ಕಂಡು ಬಹು ದಿವಸವಾಗಿತ್ತು. ನಿದ್ರೆಯಾದರೂ ಬಂದರೆ, ಅವಳ ದೇಹಕ್ಕೆ ಬಲ ಬಂದೀತು; ಅವಳ ಜೀವಕ್ಕೆ ಸಮಾಧಾನ ಸಿಕ್ಕೀತು. ಮನೆಯವರು ಹೇಗೋ ಕಷ್ಟಪಟ್ಟು, ಬಲವಂತ ಮಾಡಿ ಅವಳನ್ನು ಮಲಗಿಸಿದರು. ಅವಳೂ ನಿದ್ರೆ ಬಂದಂತೆ ಅಲುಗಾಡದೆ ಮಲಗಿದಳು.

ಒಂದು ರಾತ್ರೆ, ಅವಳು ಉಸಿರು ಬಿಡುವ ರೀತಿಗೆ ಕಿವಿಗೊಟ್ಟು, ಅವಳಿಗೆ ಸಮಾಧಾನವಾಯಿತೆಂದು ಗಂಡನು ತಿಳಿದನು. ಇಷ್ಟು ದಿನದ ಮೇಲೆ ಅವಳು ನಿದ್ರೆ ಕಂಡಳಲ್ಲಾ ಎಂದು ದೇವರಿಗೆ ಕೃತಜ್ಞತೆಯಿಂದ ಕೈಮುಗಿದು ತಾನೂ ಮಲಗಿ ನಿದ್ರೆ ಹೋದ. ಅದರಿಂದಲೇ, ತನ್ನ ಹೆಂಡತಿ ಮೆಲ್ಲನೆ ಎದ್ದು ಬಟ್ಟೆ ಸವರಿಸಿಕೊಂಡು, ನಿಶ್ಶಬ್ದವಾಗಿ ಮನೆ ಬಿಟ್ಟು ಹೊರಟು, ತನ್ನ ಮನಸ್ಸಿನ ತುಂಬ ತುಂಬಿಕೊಂಡ ಮಗುವನ್ನು ಮಣ್ಣು ಮಾಡಿದ್ದ ಸ್ಮಶಾನಕ್ಕೆ ಹೋದುದನ್ನು ಅವನು ಕಾಣಲಿಲ್ಲ. ಮನೆಯ ತೋಟವನ್ನು ಹಾದು, ದಾರಿಯ ಹೊಲಗಳನ್ನು ದಾಟಿ, ಸ್ಮಶಾನವನ್ನು ಸೇರಿದಳು. ಅವಳನ್ನು ದಾರಿಯಲ್ಲಿ ಯಾರೂ ನೋಡಲಿಲ್ಲ, ಅವಳೂ ಯಾರನ್ನೂ ನೋಡಲಿಲ್ಲ. ಅವಳ ಗಮನವೆಲ್ಲ ಆ ಮಗುವಿನ ಸಮಾಧಿಯ ಕಡೆ ಇತ್ತು. ನಕ್ಷತ್ರಗಳ ಬೆಳಕು ತುಂಬಿದ ರಾತ್ರೆ. ಗಾಳಿಯಿಲ್ಲ, ಸದ್ದಿಲ್ಲ. ಆಕೆ ಸ್ಮಶಾನಕ್ಕೆ ಬಂದು, ಹೊಸದಾಗಿ ಮಣ್ಣು ರಾಶಿಮಾಡಿದ್ದ ಆ ಹೊಸ ಸಮಾಧಿಯ ಬಳಿ ಬಂದು ನಿಂತಳು. ಹಾಗೆಯೇ ಕುಳಿತಳು. ಸಮಾಧಿಯ ಮೇಲೆ ಹಾಗೆಯೇ ತಲೆಯಿಟ್ಟು ಒರಗಿದಳು. ಆ ಮಗುವಿನ ಮೆಲುನಗೆ, ಅದರ ಕಣ್ಣುಗಳ ಬೆಳಕು ಕಣ್ಣಿಗೆ ಕಟ್ಟಿದಂತಿತ್ತು. ಕಾಯಿಲೆಯಾಗಿ ಹಾಸಿಗೆಯ ಮೇಲೆ ಮಲಗಿದ್ದ ಆ ಮಗುವಿನ ಚಿತ್ರವನ್ನು ಅವಳು ಮರೆಯುವಂತಿರಲಿಲ್ಲ. ಆ ಮಗು ಕೈಲಾಗದೆ ತನ್ನ ಕಡೆ ನೋಡಿದ್ದು, ತಾನು ಅದರ ನಿತ್ರಾಣವಾದ ಕೈಯನ್ನು ಸವರಿ ಅದರ ಮುಖದ ಹತ್ತಿರ ಮುಖವಿಟ್ಟದ್ದು, ಎಲ್ಲವೂ ಜ್ಞಾಪಕ

ಬಂದಿತು. ಆ ಮಗುವಿನ ತೊಟ್ಟಿಲ ಬಳಿ ಕುಳಿತಿದ್ದವಳು ಅದೇ ಮಗುವಿನ ಸಮಾಧಿಯ ಬಳಿ ಕುಳಿತಿದ್ದುದನ್ನು ನೆನಸಿಕೊಂಡು ಗಳಗಳ ಅತ್ತುಬಿಟ್ಟಳು.

"ತಾಯಿ, ನೆಲದೊಳಕ್ಕೆ ಹೋಗಿ ನಿನ್ನ ಮಗುವಿನೊಡನೆ ಇರಲು ನಿನಗೆ ಸಂತೋಷವಾಗುವುದಲ್ಲವೆ?" ಎಂದು ಪಕ್ಕದಲ್ಲಿ ಯಾವುದೋ ಗಂಭೀರವಾದ ಧ್ವನಿ ಸ್ಪಷ್ಟವಾಗಿ ಕೇಳಿಸಿತು. ಅದು ಕೇಳಿ ಅವಳ ಹೃದಯ ಜುಮ್ಮೆಂದಿತು.

ತಲೆಯೆತ್ತಿ ನೋಡಿದಳು. ಪಕ್ಕದಲ್ಲಿ ಒಬ್ಬ ನಿಂತಿದ್ದ, ಕರಿಯ ಬಟ್ಟೆ ಮುಖಕ್ಕೆ ಮುಸುಕು ಹಾಕಿದ್ದ. ಅವನ ಮುಖದಲ್ಲಿ, ಏನೂ ಭಾವ ಕಾಣಿಸದಿದ್ದರೂ, ನೋಡಿದರೆ ಏನೋ ನಂಬಿಕೆ ಹುಟ್ಟುತ್ತಿತ್ತು. ಅವನ ಕಣ್ಣಿನ ಕಳೆ ಧೈರ್ಯ ಕೊಡುತ್ತಿತ್ತು.

"ನನ್ನ ಮಗುವಿನೊಡನೆ ನಾನು ಪಾತಾಳಕ್ಕಾದರೂ ಹೋದೇನು" ಎಂದು ನಿರಾಶೆಯಿಂದ ಬೇಡಿಕೊಂಡಳು.

ಅದಕ್ಕೆ ಆ ರೂಪು "ನನ್ನ ಹಿಂದೆ ಬರುವ ಧೈರ್ಯ ನಿನಗಿದೆಯೆ? ನಾನು ಮೃತ್ಯು" ಎಂದಿತು.

ಆಕೆ ಅದಕ್ಕೆ ಒಪ್ಪಿ ತಲೆ ಬಾಗಿದಳು. ಇದ್ದಕ್ಕಿದ್ದಂತೆ ನಕ್ಷತ್ರಗಳೆಲ್ಲ ಹುಣ್ಣಿಮೆಯ ಚಂದ್ರನಂತೆ ಹೊಳೆಯತೊಡಗಿದುವು. ಭೂಮಿ ಬಾಯಿ ಬಿಟ್ಟಿತು. ಅವಳು ಭೂಗರ್ಭದಲ್ಲಿ ಮುಳುಗಿದಳು. ಮೃತ್ಯುವಿನ ಕರಿಯ ಮುಸುಕು, ಕಾಳರಾತ್ರಿಯ ಕರಿಯ ಮುಸುಕು, ಅವಳನ್ನು ಆವರಿಸಿತ್ತು. ಬಹುದೂರ ಭೂಗರ್ಭದಲ್ಲಿ ಇಳಿದ ಮೇಲೆ ಮೃತ್ಯು ತನ್ನ ಮುಸುಕನ್ನು ತೆಗೆದ. ತಾಯಿ ಸುತ್ತಲೂ ನೋಡಿದಳು. ಒಂದು ವಿಶಾಲವಾದ ಸಭಾ ಭವನ. ಮುಚ್ಚಂಜೆಯ ಬೆಳಕಿನಂತೆ ಹಿತವಾದ ಬೆಳಕು ಅಲ್ಲಿ ತುಂಬಿತ್ತು. ಮರುಕ್ಷಣದಲ್ಲೇ ಅವಳ ಮಗು ಪ್ರತ್ಯಕ್ಷವಾಯಿತು. ತಾಯಿ ಅದನ್ನು ಹೃದಯಕ್ಕೆ ಅವುಚಿ ಹಿಡಿದಳು. ಎಲ್ಲೋ ದೂರದಲ್ಲಿ ಆದಂತೆ, ಆದರೂ ಹತ್ತಿರದಲ್ಲೇ ಇರುವಂತೆ, ಗಾನ ಕೇಳಿಬರುತ್ತಿತ್ತು. ಅಂತಹ ಗಾನವನ್ನು ಅವಳು ಅದುವರೆಗೆ ಕೇಳಿರಲಿಲ್ಲ. ಮೃತ್ಯುವಿನ ಈ ರಾಜ್ಯಕ್ಕೂ ದೇವರ

ಆ ಶಾಶ್ವತವಾದ ಸ್ಥಾನಕ್ಕೂ ನಡುವೆ ಇದ್ದ ಕರಿಯ ತೆರೆಯ ಆಕಡೆಯಿಂದ ಆ ಗಾನ ಬರುತ್ತಿತ್ತು.

ಮಗು "ಅಮ್ಮಾ! ನಮ್ಮಮ್ಮ!" ಎಂದ ಧ್ವನಿ ಆಕೆಯ ಕಿವಿಗೆ ಕೇಳಿಸಿತು. ಮಗು ಹಿಗ್ಗಿನಿಂದ ಮುತ್ತುಗಳ ಸುರಿಮಳೆ ಸುರಿಸಿದುದು ಆಕೆಗೆ ಅನುಭವವಾಯಿತು. ಅನಂತರ ಮಗು ಆ ಕರಿಯ ತೆರೆಯ ಕಡೆ ಕೈ ತೋರಿಸಿ, "ಅಮ್ಮಾ, ಅಲ್ಲಿ ಇರುವಷ್ಟು ಸೌಂದರ್ಯ ಜಗತ್ತಿನಲ್ಲಿ ಎಲ್ಲೂ ಇಲ್ಲ, ಅಮ್ಮ. ಅಲ್ಲಿ ನೋಡಮ್ಮ, ಓ, ಅಲ್ಲಿಯ ಸುಖವೇ ಸುಖ!" ಎಂದಿತು.

ಆದರೆ, ಮಗು ತೋರಿಸಿದ ಕಡೆ ತಾಯಿಗೆ ಏನೂ ಕಾಣಲಿಲ್ಲ. ಬರಿಯ ಕರಿಯ ತೆರೆ ಮಾತ್ರ. ಆಕೆ ಇನ್ನೂ ಮನುಷ್ಯಲೋಕದವಳೇ ಆಗಿದ್ದುದರಿಂದ ದೇವಲೋಕವನ್ನು ಸೇರಿದ್ದ ಆ ಮಗುವಿಗೆ ಗೋಚರವಾದುದು ಅವಳಿಗೆ ಆಗಲಿಲ್ಲ. ಅಲ್ಲಿಂದ ಬಂದ ಗಾನ ಕೇಳಿಸುತ್ತಿತ್ತು, ಆದರ ಮಾತು ಮಾತ್ರ ಕೇಳುತ್ತಿರಲಿಲ್ಲ. ಮಾತೇ ಮುಖ್ಯ, ಏಕೆಂದರೆ ನಂಬಿಕೆಗೆ ಅದೇ ಮೂಲ.

"ಅಮ್ಮಾ, ಈಗ ನಾನು ಹಾರಬಲ್ಲೆ, ಅಮ್ಮ" ಎಂದಿತು ಮಗು. "ಇತರ ಮಕ್ಕಳೊಡನೆ ನಾನೂ ಆ ಸರ್ವೇಶ್ವರನ ಸಮ್ಮುಖಕ್ಕೆ ಹಾರಿ ಹೋಗಬಲ್ಲೆ. ನಾನು ಈಗ ಹಾರಿಹೋಗಬೇಕೆಂದು ನನಗೆ ಇಷ್ಟ. ಆದರೆ, ಅಮ್ಮ, ನೀನು ಈಗ ಅಳುತ್ತಿರುವಂತೆ ಅಳುತ್ತಿದ್ದರೆ, ನೀನು ಪುನಃ ನನ್ನನ್ನು ನೋಡದೆಯೆ ಹೋಗಬಹುದು. ಆದರೂ ಸಂತೋಷದಿಂದ ಹೋಗಬೇಕೆಂದು ನನ್ನ ಆಸೆ. ನಾನು ಹಾರಿಹೋಗಬಾರದೆ, ಅಮ್ಮ? ನೀನೂ ಬೇಗನೆ ನಮ್ಮ ಜೊತೆಗೆ ಬರುವೆಯಲ್ಲವೆ, ಅಮ್ಮ?"

"ಅಯ್ಯೋ, ನಿಲ್ಲು. ಒಂದು ಗಳಿಗೆ ನಿಲ್ಲು. ಒಂದೇ ಗಳಿಗೆ. ಒಂದು ಕ್ಷಣ ಕಣ್ಣುತುಂಬ ನೋಡುತ್ತೇನೆ. ಒಂದು ಮುತ್ತು. ಒಂದು ಸಲ ತಬ್ಬಿಕೊಳ್ಳುತ್ತೇನೆ" ಎಂದು ಆಕೆ ಆ ಮಗುವನ್ನು ತಬ್ಬಿಕೊಂಡು ಮುದ್ದಾಡಿದಳು.

ಇದ್ದಕ್ಕಿದ್ದಂತೆ ಮೇಲಿನಿಂದ ಯಾರೋ ಅವಳ ಹೆಸರು ಹಿಡಿದು ಕೂಗಿದಂತಾಯ್ತು. ಯಾರು? ದೈನ್ಯದಿಂದ ಯಾರೋ ಕೂಗುತ್ತಿದ್ದರು.

"ಕೇಳಿಸುವುದೆ, ಅಮ್ಮ? ಅಪ್ಪ ನಿನ್ನನ್ನು ಕೂಗುತ್ತಿದ್ದಾನೆ" ಎಂದಿತು, ಮಗು. ಕೆಲವು ಕ್ಷಣವಾದ ಮೇಲೆ ಯಾರದೋ ನಿಟ್ಟುಸಿರು ಕೇಳಿಬಂತು. "ಅದೊ, ನನ್ನ ಅಕ್ಕಂದಿರು! ಏನಮ್ಮ, ಅವರನ್ನು ಮರೆತೇಬಿಟ್ಟೆಯ ನೀನು!" ಎಂದಿತು ಮಗು.

ಆಗ ಆ ತಾಯಿಗೆ ತಾನು ಬಿಟ್ಟುಬಂದವರ ನೆನಪಾಯಿತು. ಭಯ ದಿಂದ ಥರಥರ ನಡುಗಿದಳು. ಆ ಕಾಳರಾತ್ರಿಯಲ್ಲಿ ಸುತ್ತ ನೋಡಿದಳು. ಮಸಕುಮಸಕಾದ ಆಕಾರಗಳು ಹಾದುಹೋದುವು. ಮೃತ್ಯುವಿನ ರಾಜ್ಯ ದಿಂದ ಆ ಕರಿಪರದೆಯ ಕಡೆಗೆ ಹಾದುಹೋದ ಆಕಾರಗಳಲ್ಲಿ ಕೆಲವು ಅವಳಿಗೆ ಗುರುತು ಹತ್ತಿದಂತಾಯ್ತು. ತನ್ನ ಗಂಡ, ತನ್ನ ಇಬ್ಬರು ಮಕ್ಕಳು ಹೀಗೆಯೇ ಹಾದುಹೋದಾರೊ? ಇಲ್ಲ, ಇಲ್ಲ. ಅವರ ನಿಟ್ಟು ಸಿರುಗಳೂ ಅವರ ಗೋಳಾಟಗಳೂ ಇನ್ನೂ ಮೇಲಿಂದ ಕೇಳಿಸುತ್ತಿವೆ. ಸತ್ತ ತನ್ನ ಮಗುವಿಗಾಗಿ ಆಕೆ ಬದುಕಿದ್ದವರನ್ನು ಮರೆತೇಬಿಟ್ಟಿದ್ದಳು.

"ಅಮ್ಮಾ, ಸ್ವರ್ಗದಲ್ಲಿ ಗಂಟೆಗಳ ದನಿಯಾಗುತ್ತಿದೆ. ಇನ್ನೇನು, ಸೂರ್ಯ ಹುಟ್ಟಿಬಿಡುತ್ತಾನೆ" ಎಂದಿತು ಮಗು.

ಒಂದು ಮಹತ್ತಾದ ಪ್ರಭೆ ಹೊಳೆಯಾಗಿ ಹರಿದು ಬಂದು ಅವಳನ್ನು ಕೊಚ್ಚಿಕೊಂಡು ಹೋಯಿತು. ಮಗು ಕಣ್ಮರೆಯಾಯಿತು. ಅವಳನ್ನು ಯಾವುದೋ ಶಕ್ತಿ ಮೇಲಕ್ಕೆ ಒಯ್ದು ತಂದಿತು. ಸುತ್ತ ಎಲ್ಲ ಚಳಿಚಳಿ ಯಾಗಿತ್ತು. ತಲೆ ಎತ್ತಿದಳು. ಸ್ಮಶಾನದಲ್ಲಿ, ತನ್ನ ಮಗುವಿನ ಸಮಾ ಧಿಯ ಬಳಿ ತಾನು ಬಿದ್ದಿದ್ದುದು ಕಾಣಿಸಿತು. ದೇವರು, ಅವಳ ಕನಸಿನಲ್ಲಿ, ಅವಳ ಹೆಜ್ಜೆಗಳನ್ನು ಸರಿಯಾಗಿ ನಡೆಸಿ, ಅವಳ ಆತ್ಮಕ್ಕೆ ದೀಪ ತೋರಿಸಿದ್ದ. ಆಕೆ ಆ ಪರಾತ್ಪರಕ್ಕೆ ಮಂಡಿಯೂರಿ ನಮಸ್ಕರಿಸಿ, ಅದರ ಕ್ಷಮೆ ಬೇಡಿದಳು. "ಅಮೃತದ ಕಡೆಗೆ ಹಾರಿಹೋಗುತ್ತಿದ್ದ ಜೀವವನ್ನು ತಡೆಯಬಯಸಿದೆನಲ್ಲ. ಬದುಕಿದ್ದವರ ಬಗೆಗೆ ತನ್ನ ಕರ್ತವ್ಯವನ್ನು ಮರೆತೆನಲ್ಲ" ಎಂದುಕೊಂಡಳು. ದೇವರಲ್ಲಿ ಕ್ಷಮೆ ಬೇಡಿದ ಮೇಲೆ ಅವಳ ಜೀವ ಹಗುರವಾಯಿತು. ಸೂರ್ಯ ಅರಳಿದ. ತಲೆಯ ಮೇಲೆ ಒಂದು ಪುಟ್ಟ ಹಕ್ಕಿ ಹಾಡುತ್ತಿತ್ತು. ದೂರದಲ್ಲಿ ದೇವಾಲಯದ ಗಂಟೆ ಕೇಳಿಬರುತ್ತಿತ್ತು. ಈ ಎಲ್ಲ ಪವಿತ್ರವಸ್ತುಗಳ ನಡುವೆ ಅವಳ ಹೃದಯ ಪರಿಶುದ್ಧವಾಯಿತು. ದೇವರು ಒಳ್ಳೆಯವನೆಂದು

ಅವಳು ಒಪ್ಪಿದಳು. ತಾನು ನಡೆಸಬೇಕಾದ ಕರ್ತವ್ಯಗಳನ್ನು ನಡೆಸುವೆನೆಂದು ಒಪ್ಪಿದಳು. ಕಾತರದಿಂದ ಮನೆಗೆ ಬಂದಳು. ಗಂಡ ಇನ್ನೂ ಮಲಗಿದ್ದ. ಬಂದು, ಭಕ್ತಿಯಿಂದ ಅವನನ್ನು ಮುತ್ತಿಟ್ಟಳು. ಅವನಿಗೆ ಎಚ್ಚರವಾಯಿತು. ಒಬ್ಬರೊಡನೊಬ್ಬರು ಮನಃಪೂರ್ವಕವಾದ ಪ್ರೀತಿಯಿಂದ ಮಾತನಾಡಿದರು. ಪತ್ನಿಯಲ್ಲಿ ಕಾಣಬೇಕಾದ ಮಾರ್ದವವೂ ಸಾಮರ್ಥ್ಯವೂ ಆಕೆಯಲ್ಲಿ ಪುನಃ ಕಾಣಿಸಿಕೊಂಡವು. ಆಕೆ "ದೇವರು ಮಾಡಿದುದು ಎಲ್ಲವೂ ನ್ಯಾಯವಾದದ್ದೇ, ಎಲ್ಲವೂ ಒಳ್ಳೆಯದೇ" ಎಂದು ಶ್ರದ್ಧೆಯಿಂದ ಹೇಳಿದಳು.

ಆಗ ಅವಳ ಗಂಡ "ಇಷ್ಟು ಸಹನೆಯ ಶಕ್ತಿ, ದೇವರಲ್ಲಿ ಇಷ್ಟು ನಂಬಿಕೆ ಎಲ್ಲಿಂದ ಬಂತು ನಿನಗೆ?" ಎಂದು ಆಶ್ಚರ್ಯದಿಂದ ಕೇಳಿದ.

ಆಕೆ ತನ್ನ ಗಂಡನನ್ನೂ ಮಕ್ಕಳನ್ನೂ ಮುತ್ತಿಟ್ಟು, "ಇದು, ಸತ್ತ ನನ್ನ ಮಗುವಿನ ಮೂಲಕವಾಗಿ, ದೇವರಿಂದ ಲಭಿಸಿತು" ಎಂದಳು.

# ಹೋಮರನ ಸಮಾಧಿಯ ಹೂವು

ನಕ್ಷತ್ರ ಖಚಿತವಾದ ರಾತ್ರಿಯಲ್ಲಿ, ನಿಶ್ಶಬ್ದವಾಗಿರುವಾಗ, ಬುಲ್ ಬುಲ್ ಪಕ್ಷಿಯು ಗುಲಾಬಿಯನ್ನು ಪ್ರೀತಿಸುತ್ತದೆ ಎಂಬ ವಿಷಯವನ್ನು ಪೂರ್ವದೇಶದ ಗೀತೆಗಳೆಲ್ಲ ವರ್ಣಿಸುತ್ತವೆ. ಆ ಪಕ್ಷಿಗಾಯಕ ಆ ಸುವಾಸನೆ ತುಂಬಿದ ಹೂಗಳ ಹತ್ತಿರ ರಾತ್ರಿ ಪ್ರೇಮಗೀತ ಹಾಡುತ್ತಿರುತ್ತದೆ.

ಸ್ಮಿರ್ನ ಎಂಬ ಪ್ರದೇಶದಲ್ಲಿ ಒಂದು ಸಮಾಧಿಯಿದೆ. ಗ್ರೀಸ್ ದೇಶದ ಮಹಾಕವಿಯಾದ ಹೋಮರ್ ಎಂಬಾತನ ಸಮಾಧಿ ಅದು. ಅಲ್ಲಿ, ಒಬ್ಬ ವ್ಯಾಪಾರಿ, ಒಂಟೆಗಳ ಮೇಲೆ ಸಾಮಾನು ಹೇರಿಕೊಂಡು ಹೋಗುವಲ್ಲಿ, ಸಾಲುಮರಗಳು ಬೆಳೆದಿರುವಲ್ಲಿ, ಗುಲಾಬಿ ಗಿಡಗಳ ಬೇಲಿಯನ್ನು ಕಂಡ. ಸಾಲುಮರಗಳ ಕೊಂಬೆಗಳ ನಡುವೆ ಪಾರಿವಾಳ ಹಾರಿಹೋಗುವಾಗ, ಸೂರ್ಯಕಿರಣ ಅದರ ರೆಕ್ಕೆಗಳ ಮೇಲೆ ಬಿದ್ದು, ಆಣಿ ಮುತ್ತಿನಂತೆ ಹೊಳೆಯಿತು. ಗುಲಾಬಿಯ ಬೇಲಿಯಲ್ಲಿ ಒಂದು ಹೂ ಬೆಳೆದಿತ್ತು. ಉಳಿದ ಎಲ್ಲ ಹೂಗಳಿಗಿಂತ ಸುಂದರವಾಗಿತ್ತು. ಬುಲ್‌ಬುಲ್ ಹಕ್ಕಿ ತನ್ನ ಪ್ರೇಮ ಗೀತಗಳನ್ನೆಲ್ಲ ಅದಕ್ಕೆ ಹಾಡಿತು. ತನ್ನ ವ್ಯಥೆಗಳನ್ನೆಲ್ಲ ಅದರ ಹತ್ತಿರ ಹೇಳಿಕೊಂಡಿತು. ಆದರೆ ಗುಲಾಬಿ ಮೌನವಾಗಿತ್ತು. ಸಹಾನುಭೂತಿಯ ಕಣ್ಣೀರಿನ ಹಾಗೆ ಒಂದಾದರೂ ಮಂಜಿನ ಹನಿ ಅದರ ಎಲೆಯ ಮೇಲೆ ಕುಳಿತಿರಲಿಲ್ಲ. ಕಟ್ಟಕಡೆಗೆ ಆ ಗುಲಾಬಿ ಒಂದು ಕಲ್ಲುಗುಡ್ಡೆಯ ಮೇಲೆ ತಲೆಯಿಟ್ಟು, "ಜಗತ್ತಿನಲ್ಲೆಲ್ಲ ಮಹಾಗಾಯಕನಾದ ಹೋಮರ್ ಇಲ್ಲಿ ವಿಶ್ರಾಂತಿ ಪಡೆದಿದ್ದಾನೆ. ನನ್ನ ಪರಿಮಳವನ್ನು ಅವನ ಸಮಾಧಿಯ ಮೇಲೆ ಹರಡಿ, ಬಿರುಗಾಳಿ ಬೀಸಿದಾಗ ನನ್ನ ಎಲೆಗಳನ್ನು ಕೆದರುತ್ತೇನೆ. ಟ್ರಾಯ್‌ನಗರವನ್ನು ಕುರಿತು ಹಾಡಿದ ಹೋಮರ್ ಹಿಡಿಮಣ್ಣಾದ; ಆ ಮಣ್ಣಿನಿಂದ ನಾನು

ಹುಟ್ಟಿದ್ದೇನೆ. ಹೋಮರನ ಸಮಾಧಿಸ್ಥಾನದಿಂದ ಹುಟ್ಟಿದ ನಾನು ಒಂದು ಬುಲ್‌ಬುಲ್ ಪಕ್ಷಿಗಾಗಿ ಅರಳಿಬಿಡುವುದೆ!" ಎಂದು ಉಪೇಕ್ಷೆಯಿಂದ ಸುಮ್ಮನಿದ್ದಿತು. ಬುಲ್‌ಬುಲ್ ಹಾಗೇ ಹಾಡಿಹಾಡಿ ಪ್ರಾಣಬಿಟ್ಟಿತು. ಒಂಟೆಗಳನ್ನು ಓಡಿಸುತ್ತ ಒಬ್ಬ ಬಂದ. ಅವನ ಸಣ್ಣ ಹುಡುಗ ಆ ಸತ್ತ ಹಕ್ಕಿಯನ್ನು ಕಂಡ. ಆ ಚೆಲುವು ಗಾಯಕನನ್ನು ಮಹಾಹೋಮರನ ಸಮಾಧಿಯ ಬಳಿಯೇ ಮಣ್ಣುಮಾಡಿದ. ಗುಲಾಬಿ ಮಾತ್ರ ಗಾಳಿಗೆ ನಡುಗುತ್ತಾ ಹಾಗೇ ಇತ್ತು.

ಸಂಜೆಯಾಯಿತು. ಗುಲಾಬಿ ತನ್ನ ಎಲೆಗಳನ್ನು ಮೈಸುತ್ತ ಇನ್ನೂ ಬಿಗಿಯಾಗಿ ಎಳೆದುಕೊಂಡು, ಕನಸು ಕಾಣತೊಡಗಿತು. ಇದು ಅದರ ಕನಸು :

ಒಳ್ಳೆಯ ಸುಂದರವಾದ ದಿನ, ಚೆನ್ನಾದ ಸೂರ್ಯನ ಬೆಳಕು. ಹೋಮರನ ಸಮಾಧಿಗೆ ಯಾತ್ರೆ ಬಂದಿದ್ದ ಜನರ ಗುಂಪು ಆ ಗುಲಾಬಿಪೊದೆಯ ಬಳಿ ಬಂತು. ಅವರಲ್ಲಿ ಒಬ್ಬ ಉತ್ತರದ ಕಡೆಯಿಂದ ಬಂದವನು, ಗಮಕಿ. ಅವನು ಆ ಗುಲಾಬಿಯನ್ನು ಕಿತ್ತು, ಒಂದು ಪುಸ್ತಕದಲ್ಲಿ ಇರಿಸಿ, ಅದನ್ನು ಬಲು ದೂರದಲ್ಲಿದ್ದ ತನ್ನ ತಾಯ್ನಾಡಿಗೆ ಒಯ್ದ. ಗುಲಾಬಿ ದುಃಖದಿಂದ ಬಾಡಿತು. ಪುಸ್ತಕದ ಪುಟಗಳ ನಡುವೆ ಮಲಗಿತು. ಅವನು ತನ್ನ ಮನೆಯಲ್ಲಿ ಪುಸ್ತಕ ಬಿಚ್ಚಿ, "ಇದು ಹೋಮರನ ಸಮಾಧಿಯಿಂದ ತಂದ ಗುಲಾಬಿ" ಎಂದ.

ಆಗ ಹೂವಿಗೆ ತನ್ನ ಕನಸಿನಿಂದ ಎಚ್ಚರವಾಯಿತು. ಅದು ಗಾಳಿಗೆ ಥರಥರ ನಡುಗಿತು. ಎಲೆಗಳಿಂದ ಒಂದು ಮಂಜಿನ ಹನಿ ಆ ಬುಲ್‌ಬುಲ್ ಗಾಯಕನ ಸಮಾಧಿಯ ಮೇಲೆ ಬಿತ್ತು. ಸೂರ್ಯ ಉದಯಿಸಿದ, ಹೂವು ಎಂದಿಗಿಂತ ಸುಂದರವಾಗಿ ಅರಳಿತು. ಹಗಲ ಬಿಸಿಲು ಬಹುವಾಗಿತ್ತು. ಆದರೂ ಹೂವು ಸ್ವಸ್ಥಾನದಲ್ಲಿತ್ತು. ಆಗ ಕಾಲುಗಳ ಹೆಜ್ಜೆ ಹತ್ತಿರ ಬಂದಂತಾಯ್ತು. ಗುಲಾಬಿ ಕನಸಿನಲ್ಲಿ ಕಂಡ ಅಪರಿಚಿತರು ಅಲ್ಲಿಗೆ ಬಂದರು. ಅವರಲ್ಲಿ ಉತ್ತರದ ಕಡೆಯಿಂದ ಬಂದವನು ಒಬ್ಬ ಕವಿಯಿದ್ದ. ಅವನು ಆ ಗುಲಾಬಿಯನ್ನು ಕಿತ್ತು, ಅದರ ಮುಖಕ್ಕೆ ಮುತ್ತಿಟ್ಟು, ಅದನ್ನು ತನ್ನ ಉತ್ತರದೇಶಗಳಿಗೆ ಕೊಂಡುಹೋದ. ಅವನು ಇಟ್ಟುಕೊಂಡಿದ್ದ

ಹೋಮರನ ಇಲಿಯಡ್" ಎಂಬ ಮಹಾಕಾವ್ಯವ ಪ್ರತಿಯಲ್ಲಿ ಆ ಗುಲಾಬಿ ಮಲಗಿದೆ. ಅವನು ಪುಸ್ತಕ ಬಿಚ್ಚಿದಂತೆಯೂ, ಹಾಗೆ ಬಿಚ್ಚಿದಾಗಲೆಲ್ಲ "ಹೋಮರನ ಸಮಾಧಿಯಿಂದ ತಂದ ಗುಲಾಬಿ ಇಲ್ಲಿದೆ" ಎಂದು ಅವನು ಹೇಳಿದಂತೆಯೂ ಅದು ಆಗಾಗ್ಗೆ ಕನಸು ಕಾಣುತ್ತದೆ.

# ನನ್ನ ಕಣ್ಣಾಣೆಗೂ ನಿಜ!

"ಅಬ್ಬಬ್ಬಾ! ನೆನೆಸಿಕೊಂಡರೆ ಈಗಲೂ ಮೈ ಜುಮ್ಮೆನ್ನುತ್ತದೆ. ಎಲ್ಲಾ ಕೋಳಿಗಳೂ ಇಲ್ಲಿ ಜೊತೆಗಿರುವದರಿಂದ ನಾನು ಇದ್ದೇನೆಯೆ ಹೊರತು, ಒಂಟಿಯಾಗಿ ಒಂದು ರಾತ್ರಿಯಾದರೂ ಆ ಕೋಳಿಯ ಗೂಡಿನಲ್ಲಿ ನಾನು ಬೇರೆ ಖಂಡಿತ ಇರಲಾರೆ" ಎಂದು ಒಂದು ಕೋಳಿ ಒಂದು ದಿನ ಹೇಳಿತು.

"ಅಬ್ಬಬ್ಬಾ! ಅದೇನಾಯಿತು ಅಂಥದು?" ಎಂದು ಇತರ ಕೋಳಿಗಳೆಲ್ಲ ಕೇಳಿದಾಗ ಆ ಕೋಳಿ ತಾನು ಕಿವಿಯಾರೆ ಕೇಳಿದ ಒಂದು ಕಥೆಯನ್ನು ಹೇಳಿತು. ಅದರ ಕಥೆಯನ್ನು ಕೇಳಿ ಭಯವುಂಟಾಗಿ ಮಿಕ್ಕ ಕೋಳಿಗಳ ಮೈಯ ಪುಕ್ಕಗಳೆಲ್ಲ ನಿಮಿರಿ ನಿಂತವು. ಹುಂಜದ ತಲೆಯ ಕೆಂಪು ಜುಟ್ಟು ಕೂಡ ಭಯದಿಂದ ಮುದುರಿಕೊಂಡಿತು.

ಇಷ್ಟೆಲ್ಲಾ ಭಯವುಂಟುಮಾಡಿದ ಆ ಕಥೆಯಾದರೂ ಏನು? ಅದು ಎಲ್ಲಿ ನಡೆಯಿತು? ಮೊದಲಿನಿಂದ ನೋಡೋಣ.

ಊರಾಚೆ ಒಂದು ದೊಡ್ಡ ಕೋಳಿಯ ಗೂಡಿತ್ತು. ಅಲ್ಲಿನ ಕೋಳಿಗಳು ಎಂದಿನಂತೆ ಸಾಯಂಕಾಲವಾದೊಡನೆ ಗೂಡಿನಲ್ಲಿ ಕುಳಿತು ತೂಕಡಿಸಿ ನಿದ್ರೆಮಾಡುತ್ತಿದ್ದುವು. ಆ ಕೋಳಿಗಳ ಗುಂಪಿನಲ್ಲಿ ಒಂದು ಬಿಳಿಯ ಗರಿಗಳ ಕೋಳಿ ಇತ್ತು. ಅದರ ಕಾಲುಗಳು ಮುದ್ದಾಗಿದ್ದುವು. ಅದು ತಪ್ಪದೆ ದಿನವೂ ಮೊಟ್ಟೆಯಿಡುತ್ತಿದ್ದುದರಿಂದ ಅದು ಎಲ್ಲರಿಗೂ ಕಣ್ಣಾಗಿತ್ತು.

ಒಂದು ದಿನ ಆ ಬಿಳಿಯ ಕೋಳಿ ಗೂಡಿನಲ್ಲಿ ಮೇಲೆ ಹಾರಿದಾಗ, ಅದೇನು ಪರಚಿಕೊಂಡಿತೋ, ಅಥವಾ ಕೆದರಿಕೊಂಡಿತೋ, ಅದರ ಪುಕ್ಕಗಳಲ್ಲಿ ಒಂದು ಉದುರಿಹೋಯಿತು.

"ಸರಿ, ಇನ್ನೊಂದು ಪುಕ್ಕ ಹೋಯಿತು. ಹೀಗೆ ಪ್ರತಿ ಸಲ ಕೆದಕಿಕೊಂಡಾಗಲೂ ಒಂದೊಂದು ಪುಕ್ಕ ಬಿದ್ದುಹೋದರೆ ಎಷ್ಟು ಚೆನ್ನಾಗಿರುತ್ತದೆ!" ಎಂದು ಆ ಕೋಳಿ ತನಗೆ ತಾನೇ ಹೇಳಿಕೊಂಡಿತು.

ಸ್ವಲ್ಪ ಹೊತ್ತಿನೊಳಗಾಗಿಯೇ ಅದು ಆ ಬಿದ್ದ ಪುಕ್ಕವನ್ನು ಮರೆತುಬಿಟ್ಟಿತು. ಅದಕ್ಕೆ ಬೇಗ ನಿದ್ರೆ ಬಂತು.

ಸರಿರಾತ್ರಿಯಾಯಿತು. ಕೋಳಿಗಳೆಲ್ಲ ಸಾಲಾಗಿ ಒಂದರ ಪಕ್ಕದಲ್ಲೊಂದು ಕುಳಿತು ತೂಕಡಿಸುತ್ತಿವೆ. ಆದರೆ ಒಂದು ಕೋಳಿಗೆ ಮಾತ್ರ, ಏನು ಮಾಡಿದರೂ, ನಿದ್ರೆ ಹತ್ತದು. ಅದು ಆ ಬಿಳಿಯ ಕೋಳಿ ಹೇಳಿದ ಮಾತನ್ನು ಅಲ್ಪಸ್ವಲ್ಪ ಕೇಳಿತು.

ಈ ನಿದ್ದೆ ಬಾರದ ಕೋಳಿ ಹಾಗೇ ತನ್ನ ಪಕ್ಕದ ಕೋಳಿಯನ್ನು ತಿವಿದು ಎಬ್ಬಿಸಿ, "ಕೇಳಿದೆಯ? ಯಾರು ಎಂದು ಹೆಸರು ಹೇಳುವುದು ಬೇಡ. ಒಂದಾನೊಂದು ಕೋಳಿ ತನ್ನ ಪುಕ್ಕಗಳನ್ನೆಲ್ಲ ಕೊಕ್ಕಿನಿಂದ ಕಿತ್ತುಹಾಕಿ, ನೋಡುವುದಕ್ಕೆ ಅಸಹ್ಯವಾಗಿಬಿಟ್ಟಿದೆ. ನಾನೇನಾದರೂ ಹುಂಜನಾಗಿದ್ದಿದ್ದರೆ, ಅದನ್ನು ಒದ್ದು ಓಡಿಸಿಬಿಡುತ್ತಿದ್ದೆ" ಎಂದಿತು.

ಪಕ್ಕದ ಕೋಳಿ "ಆ! ಹಾಗೇ!" ಎಂದು ಆಶ್ಚರ್ಯದಿಂದ ಕಣ್ಣರಳಿಸಿ, "ತಾಳು, ಎದುರು ಮರದ ಗೂಬೆಗಳಿಗೆ ಇದನ್ನು ಈಗಲೇ ಹೇಳಿ ಬರಬೇಕು" ಎಂದು ಹಾರಿತು.

ಎದುರು ಮರದಲ್ಲಿ ತಾಯಿ ಗೂಬೆಯೂ ತಂದೆ ಗೂಬೆಯೂ ಆ ನಿದ್ದೆ ಬಾರದ ಕೋಳಿಯ ಮಾತನ್ನು ಅಸ್ಪಷ್ಟವಾಗಿ ಕೇಳಿದ್ದವು. ಈಗ ಆ ಕೋಳಿ ಬಂದು "ಅಯ್ಯೋ, ಅಯ್ಯೋ! ಹೀಗೂ ಉಂಟೆ? ನಾವು 'ನಮಗೇಕೆ ಈ ಮಾತು?' ಎಂದು ಎಷ್ಟೇ ಕಿವಿ ಮುಚ್ಚಿಕೊಂಡರೂ ಕಿವಿಗೆ ಏನಾದರೂ ಬಿದ್ದೇ ಬೀಳುತ್ತದೆ. ಒಂದು ಕೋಳಿ, ಮಾನಮರ್ಯಾದೆ ಎಲ್ಲವನ್ನೂ ಮರೆತು, ತನ್ನ ಮೈಮೇಲಿನ ಪುಕ್ಕಗಳನ್ನೆಲ್ಲ ಕಿತ್ತುಹಾಕಿತಂತೆ. ಅನಂತರ ಹಾಗೇ ಬೆತ್ತಲೆಯಾಗಿ ಹುಂಜದ ಮುಂದೆ ಹಾದುಹೋಯಿತಂತೆ!" ಎಂದಿತು.

ಗೂಡಿನಲ್ಲಿದ್ದ ಮರಿಗೂಬೆಗಳು "ಹ ಹ ಹ ಹ!" ಎಂದು ನಕ್ಕವು.

"ಛೆ! ಛೆ! ಮಕ್ಕಳ ಎದುರಿಗೆ ಇದನ್ನೆಲ್ಲಾ ಹೇಳಬಾರದು" ಎಂದು ತಂದೆ ಗೂಬೆ ಎಂದಿತು.

ತಾಯಿ ಗೂಬೆ "ಈ ಸುದ್ದಿಯನ್ನು ನಮ್ಮ ಪಕ್ಕದ ಮರದ ಮೇಲಿರುವ ಗೂಬೆಗೆ ಖಂಡಿತ ಈಗಲೇ ತಿಳಿಸಬೇಕು" ಎಂದು ಹಾರಿ ಹೋಯಿತು.

ಅದು ಹಾರುವ ದಾರಿಯಲ್ಲಿ ಪಾರಿವಾಳಗಳ ಗೂಡಿತ್ತು.

"ಗೂಬೆ! ಗೂಬೆ! ಏನು ಸಮಾಚಾರ?" ಎಂದು ಪಾರಿವಾಳಗಳು ಕೇಳಿದವು.

"ಅಯ್ಯೋ! ಸಮಾಚಾರ ಕೇಳಿಲ್ಲವೆ? ಒಂದು ಕೋಳಿ ತನ್ನ ಮೈಮೇಲಿನ ಪುಕ್ಕಗಳನ್ನೆಲ್ಲ ಕಿತ್ತುಹಾಕಿ, ಬರಿಯ ಬೆತ್ತಲೆ ಓಡಿಯಾಡುತ್ತಿದೆ. ಹೀಗೇ ಮಾಡಿದರೆ ಅದಕ್ಕೆ ಚಳಿ ತಟ್ಟಿ, ಅದು ಖಂಡಿತ ಸತ್ತೇ ಹೋಗುತ್ತದೆ."

"ಓಹೋ! ಓಹೋ!" ಎಂದು ಪಾರಿವಾಳಗಳು ಗುಬಳಿಸಿದುವು.

"ಅಷ್ಟೇ ಅಲ್ಲ. ನಾವು ಏನೇನು ಕಿವಿಯಾರೆ ಕೇಳಿದೆವೋ ಅದನ್ನೆಲ್ಲ ಹೇಳುವುದಕ್ಕೆ ಬಾಯೇ ಬರುವುದಿಲ್ಲ. ಇದೆಲ್ಲ ನಾವು ಕಿವಿಯಾರ ಕೇಳಿದ್ದರೂ ಕಣ್ಣಾರ ಕಂಡಂತೆಯೇ ಎಂದು ಇರಿಸಿಕೊಳ್ಳಬಹುದು" ಎಂದಿತು ಆ ಕೋಳಿ.

"ಅದರಲ್ಲಿ ಸಂದೇಹವೇನು ಬಂತು? ನೀನು ಹೇಳಿದ್ದೆಲ್ಲ ಖಂಡಿತ ನಿಜ!" ಎಂದು ಆ ಪಾರಿವಾಳಗಳು ಆ ಸುದ್ದಿಯನ್ನು ತಿಳಿಸಲು ಪಕ್ಕದ ಗೂಡಿಗೆ ಹಾರಿದುವು.

"ಆ ಕೋಳಿಯ ಕಥೆ ಕೇಳಿದ್ದೀರಾ?" ಎಂದವು.

"ಒಂದು ಕೋಳಿಯಲ್ಲವಲ್ಲ. ಎರಡು ಕೋಳಿಗಳಂತೆ. ಎರಡೂ ತಮ್ಮ ಪುಕ್ಕ ಕಿತ್ತುಹಾಕಿವೆಯಂತೆ. ಆದರೆ ಒಂದು ಬೆತ್ತಲೆಯಾಗಿ ಬೀದಿಯಲ್ಲೆಲ್ಲ ಓಡುತ್ತಿದೆಯಂತೆ. ಇನ್ನೊಂದು ನಾಚಿಕೊಂಡು ಯಾವುದೋ ಮೂಲೆಯಲ್ಲಿ ಅವಿತುಕೊಂಡಿದೆಯಂತೆ."

"ಅಷ್ಟೇ ಅಲ್ಲ. ಅವೆರಡೂ ಚಳಿಗಾಳಿಯಲ್ಲಿ ಓಡಿಯಾಡಿದುದರಿಂದ ಅವಕ್ಕೆ ಸನ್ನಿ ತಟ್ಟಿ, ಅವು ಸತ್ತುಹೋದುವಂತೆ."

ಅಷ್ಟುಹೊತ್ತಿಗೆ ಬೆಳಗಿನ ಜಾವವಾಯಿತು. ಒಂದು ಹುಂಜ ಮನೆಯ ಸೂರಿನ ಮೇಲೆ ಏರಿ, "ಕೊ-ಕ್ಕೋ ಕ್ಕೋ" ಎಂದು ಕೂಗಿ ಎಲ್ಲರನ್ನೂ ಎಚ್ಚರಿಸಿತು.

ರಾತ್ರಿಯೆಲ್ಲಾ ಸುಳ್ಳು ಸುದ್ದಿ ಹರಡುತ್ತಿದ್ದ ಕೋಳಿ ಹುಂಜದ ಹತ್ತಿರ ಬಂದು, "ಪಕ್ಕದ ಕೋಳಿಗೂಡಿನಲ್ಲಿದ್ದ ಹುಂಜ, ಪಾಪ, ತನ್ನ ಮೂರು ಕೋಳಿಗಳನ್ನು ಕಳೆದುಕೊಂಡಿತಂತೆ. ಅವು ಮೂರೂ ಮೈಮೇಲಿನ ಪುಕ್ಕಗಳನ್ನು ಕಿತ್ತುಹಾಕಿ, ಚಳಿಯಿಂದ ಸನ್ನಿ ಬಂದು, ಸತ್ತೇಹೋದುವಂತೆ!" ಎಂದಿತು.

ಹುಂಜ "ಥೂ! ಎಂಥ ಹೊಲಸು ಕಥೆ! ಥೂ! ಹೋಗಾಚೆ!" ಎಂದು ಅದನ್ನು ರೆಕ್ಕೆಗಳಿಂದ ಬಡಿದು ಓಡಿಸಿಬಿಟ್ಟಿತು.

"ಅದನ್ನು ಆಚೆ ಒದ್ದೋಡಿಸು!" ಎಂದು ಬಾವಲಿ ಕಿರಿಚಿಕೊಂಡಿತು.

ಹೀಗೇ ಹೋದಹೋದ ಕಡೆಯಲ್ಲೆಲ್ಲಾ ಆ ಕೋಳಿಯನ್ನೂ ಅದು ತಂದು ಹರಡಿದ ಕತೆಯನ್ನೂ ಒದ್ದು ಒದ್ದು ಓಡಿಸಿದರು. ಕೊನೆಗೆ ಆ ಕೋಳಿ, ಕಥೆ ಮೊದಲು ಪ್ರಾರಂಭವಾದ ಕೋಳಿಯ ಗೂಡಿಗೆ ಬಂದಿತು.

ಆ ವೇಳೆಗೆ ಆ ಕಥೆ ಹೀಗಾಗಿತ್ತು: "ಐದು ಕೋಳಿಗಳು ತಮ್ಮ ಪುಕ್ಕಗಳನ್ನೆಲ್ಲಾ ಕಿತ್ತು ಬೆತ್ತಲೆಯಾಗಿ ಬೀದಿಗಳಲ್ಲಿ ಓಡಿಯಾಡಿದುವಂತೆ. ಹುಂಜ ಅದನ್ನು ಕಂಡು, 'ಕೋಳಿಗಳ ಮರ್ಯಾದೆ ಹೋಯಿತಲ್ಲಾ' ಎಂಬ ದುಃಖದಿಂದ ನವೆದು ಕೃಶವಾಗಿಹೋಯಿತಂತೆ. ಮನಸ್ಸಿನಲ್ಲುಂಟಾದ ಶೋಕವನ್ನೂ ಕೋಪವನ್ನೂ ತಡೆಯಲಾರದೆ, ಆ ಹುಂಜ ತನ್ನ ಮೈಯನ್ನೆಲ್ಲಾ ಪರಚಿಕೊಂಡು, ಧಾರಾಕಾರವಾಗಿ ರಕ್ತ ಸುರಿದು, ಅದು ಅಲ್ಲೇ ಸತ್ತುಹೋಯಿತಂತೆ. ಇದರಿಂದ ಆ ಕೋಳಿಗಳನ್ನು ಸಾಕುತ್ತಿದ್ದವನಿಗೆ ಅಪಾರವಾದ ನಷ್ಟವಾಗಿದೆಯಂತೆ."

ಈ ಕತೆಯನ್ನು ಉಳಿದ ಕೋಳಿಗಳು ಕೇಳಿದ ಹಾಗೆಯೇ ಮೊದಲು ಒಂದು ಪುಕ್ಕವನ್ನು ಕಳೆದುಕೊಂಡ ಬಿಳಿಯ ಕೋಳಿಯೂ ಕೇಳಿತು. ಅದಕ್ಕೆ ಅದು ತನ್ನ ಕಥೆಯೇ ಎಂಬುದು ಗುರುತಾಗಲಿಲ್ಲ. "ಸುಮ್ಮನೆ

ಅವರಿವರ ಸುದ್ದಿ ಇವುಗಳಿಗೆ ಏಕೆ? ಸುಮ್ಮನೆ ಹೀಗೆ ಕಿಚಿಕಿಚಿ ಎಂದು ಕೂಗಾಡುವುದಕ್ಕಿಂತ ಇಂತಹ ರಹಸ್ಯಗಳು ಏನಾದರೂ ಇದ್ದರೆ ಪತ್ರಿಕೆಗಳಿಗೆ ಬರೆದು ಕಳಿಸುವುದು ಮೇಲು. ಆಗ ಅದು ಪ್ರಪಂಚದ ಮೂಲೆ ಮೂಲೆಗಳಿಗೂ ಹರಡುತ್ತದೆ" ಎಂದು ಆ ಕೋಳಿ ವ್ಯಂಗ್ಯವಾಗಿ ಹೇಳಿತು.

ವೃತ್ತಪತ್ರಿಕೆಗಳು ಏನೂ ಆ ಸುದ್ದಿಯನ್ನು ಬಿಡಲಿಲ್ಲ. ತಮಗೆ ಬೇಕಾದ ಹಾಗೆ ಒಂದು ಸಣ್ಣ ಬದಲಾವಣೆ ಮಾಡಿದರು. "**ಒಂದು ಚಿಕ್ಕ ಪುಕ್ಕ ಐದು ಕೋಳಿಗಳಾಯಿತು**" ಎಂದು ಬರೆದು, "ನಮ್ಮ ಕಣ್ಣಾಣೆಗೂ ಇದು ನಿಜ!" ಎಂದು ಸೇರಿಸಿದರು.

# ಓಡುವ ಪಂದ್ಯ

ಓಡುವ ಪಂದ್ಯದಲ್ಲಿ ಅತಿ ವೇಗಶಾಲಿಗಳಾದವರಿಗೆ ಹಿಂದೆ ಒಂದು ಸಲ ಒಂದು ಬಹುಮಾನವನ್ನು ಕೊಟ್ಟರು. ಓಡುವ ಪಂದ್ಯವೆಂದರೆ, ಒಂದೇ ಸಲಕ್ಕೆ ಇಷ್ಟು ದೂರ ಓಡುವುದು ಎಂದಲ್ಲ; ವರುಷದ ಉದ್ದಕ್ಕೂ ಓಡುವುದರಲ್ಲಿ ಯಾರು ತುಂಬ ವೇಗವನ್ನು ತೋರಿಸುವರೋ ಅವರಿಗೆ ಬಹುಮಾನ. ಬಹುಮಾನವೆಂದರೆ ಒಂದೇ ಬಹುಮಾನವಲ್ಲ; ಎರಡು— ಒಂದು ದೊಡ್ಡದು, ಒಂದು ಸಣ್ಣದು.

"ಮೊದಲನೆಯ ಬಹುಮಾನ ನನಗೆ ಬಂತು. ಬಹುಮಾನಗಳನ್ನು ತೀರ್ಮಾನಿಸಿದ ಸಭೆಯಲ್ಲಿ ನಮ್ಮ ಬಂಧುಗಳೂ ಸ್ನೇಹಿತರೂ ಇದ್ದರೆ ತಾನೆ ಏನು? ಧರ್ಮಕ್ಕೂ ನ್ಯಾಯಕ್ಕೂ ಎಂದಾದರೂ ಚ್ಯುತಿಯುಂಟೆ? ಆದರೂ ಬಸವನಹುಳುವಿಗೆ ಎರಡನೆಯ ಬಹುಮಾನವನ್ನು ಕೊಟ್ಟರು ಎಂಬುದನ್ನು ಜ್ಞಾಪಿಸಿಕೊಂಡರೆ, ನನಗೆ ಅವಮಾನ ಮಾಡಬೇಕೆಂಬ ಉದ್ದೇಶದಿಂದಲೇ ಅದಕ್ಕೆ ಎರಡನೆಯ ಬಹುಮಾನವನ್ನು ಕೊಟ್ಟರೆಂದು ನಾನು ಧೈರ್ಯ ವಾಗಿ ಹೇಳಬಲ್ಲೆ" ಎಂದು ಮೊದಲನೆಯ ಬಹುಮಾನ ಪಡೆದ ಮೊಲ ಹೇಳಿತು.

ಬಹುಮಾನಗಳನ್ನು ಹಂಚುವಾಗ ಸಾಕ್ಷಿಯಾಗಿ ನಿಂತಿದ್ದ ಬೇಲಿಯ ಕಂಬಿ ಮೊಲದ ಮಾತನ್ನು ಅನುಮೋದಿಸದೆ, "ಛೆಛೆ! ವೇಗವೊಂದನ್ನೇ ಎಣಿಸಿದರೆ ಆಗುತ್ತದೆಯೆ? ನಿದಾನ, ತಾಳ್ಮೆ, ಸಹನೆ, ಮುಂತಾದ ಗುಣ ಗಳಿಗೆ ಏನೂ ಬೆಲೆಯೇ ಬೇಡವೆ? ಬಸವನಹುಳು ಹೊಸ್ತಿಲನ್ನು ದಾಟು ವುದಕ್ಕೆ ಅರ್ಧ ವರ್ಷ ತೆಗೆದುಕೊಂಡಿರಬಹುದು; ಆದರೂ ಆ ಪ್ರಯತ್ನ ದಲ್ಲಿ ಅದರ ಕತ್ತಿನ ಮೂಳೆ ಮುರಿದುಹೋಯಿತೆಂಬುದನ್ನು ಮರೆಯು

ವುದು ಸಾಧ್ಯವೆ? ಪಂದ್ಯವೊಂದರಲ್ಲಿಯೇ ಮಗ್ನವಾಗಿ, ಅದು ತನ್ನ ಮನೆಯನ್ನು ಕೂಡ ಬೆನ್ನಮೇಲೆ ಹೊತ್ತುಕೊಂಡು ಓಡಿತೆಂಬುದು ತುಂಬ ಸ್ತೋತ್ರಾರ್ಹವಾದ ವಿಷಯ. ಅದರಿಂದಲೇ ಅದಕ್ಕೆ ಎರಡನೆಯ ಬಹುಮಾನವನ್ನು ಸಲ್ಲಿಸಿದರು." ಎಂದು ಹೇಳಿತು.

ಆ ಮಾತನ್ನು ಕೇಳಿದ ಬಸವನ ಹುಳು "ನನಗೆ ಮೊದಲನೆಯ ಬಹುಮಾನವೇ ಬರಬೇಕಾಗಿತ್ತು. ಆದರೆ ನನಗೆ ಎರಡನೆಯ ಬಹುಮಾನ ಕೊಟ್ಟರು. ನಾನು ಇಷ್ಟುಮಾತ್ರ ಹೇಳಬಲ್ಲೆ: ನಿದಾನ ಮಾಡಿದರೆ ಎಲ್ಲಿ ಸೋತುಹೋಗುತ್ತೇನೋ! ಎಲ್ಲಿ ಬಹುಮಾನ ತಪ್ಪಿಹೋಗುತ್ತದೋ! ಎಂಬ ಅಂಜಿಕೆಯಿಂದ ಮೊಲ ಓಡಿತು. ಆದರೆ ನಾನೋ, ಓಡುವುದನ್ನೇ ನನ್ನ ಜೀವನದ ಧ್ಯೇಯವನ್ನಾಗಿ ಇರಿಸಿಕೊಂಡು, ಆ ಉದ್ಯಮದಲ್ಲಿ ಕತ್ತಿನ ಮೂಳೆಯನ್ನು ಕೂಡ ಮುರಿದುಕೊಂಡೆ. ಇಂತಹ ಏಕನಿಷ್ಠೆಯುಳ್ಳ ನನಗಲ್ಲದೆ ಮೊದಲನೆಯ ಬಹುಮಾನವನ್ನು ಬೇರೆ ಯಾರಿಗಾದರೂ ಕೊಡಬಹುದೆ? ಸುಮ್ಮನೆ ಮಾತನಾಡಿ ಏನು ಪ್ರಯೋಜನ? ಆತ್ಮ ಶ್ಲಾಘನೆ ಮಾಡಿಕೊಳ್ಳುವುದು ನನಗೆ ಇಷ್ಟವಿಲ್ಲ. ತ್ಥುತ್!" ಎಂದು ಒಂದು ಕಡೆಗೆ ಉಗುಳಿತು.

ಪಂದ್ಯದಲ್ಲಿ ತೀರ್ಪುಕೊಟ್ಟವರ ಸಭೆಗೆ ಅಧ್ಯಕ್ಷತೆ ವಹಿಸಿದ್ದ ಒಂದು ಮುದಿ ಮೈಲಿಕಲ್ಲು "ನಾನು ಸತ್ಯವಾಗಿ ಹೇಳುತ್ತೇನೆ, ಆಣೆಯಿಟ್ಟು ಹೇಳುತ್ತೇನೆ: ನಾನಂತೂ ನನ್ನ ಮತ ಕೊಡುವಾಗ ನಿಷ್ಪಕ್ಷಪಾತದಿಂದ ಗುಣಗಳನ್ನೇ ಎಣಿಕೆಮಾಡಿ ಮತಕೊಡುತ್ತೇನೆ. ನಾನು ಯಾವಾಗಲೂ ನನ್ನ ಮನಸ್ಸಾಕ್ಷಿಗೆ ವಿರುದ್ಧವಾಗಿ ಕೆಲಸ ಮಾಡುವವನಲ್ಲ. ಇದೂ ಸೇರಿ ನಾನು ಇದುವರೆಗೆ ಏಳು ಸಲ ಹೀಗೇ ತೀರ್ಪುಗಾರರ ಸಭೆಗೆ ಅಧ್ಯಕ್ಷನಾಗಿದ್ದೇನೆ. ಆದರೆ ಈ ಸಲ ಮಾತ್ರ ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ಕೆಲಸಮಾಡಲು ಸಾಧ್ಯವಾಗಿದೆ. ನಾನು ಯಾವ ಕೆಲಸ ಮಾಡಿದರೂ ಅದರಲ್ಲಿ ಒಂದು ಕ್ರಮವಿದೆ. ನಾನು ಮೊದಲನೆಯ ಬಹುಮಾನ ಕೊಡಬೇಕಾದರೆ ಇಂಗ್ಲಿಷು ವರ್ಣಮಾಲೆಯ ಪ್ರಾರಂಭದಿಂದಲೂ ಎರಡನೆಯ ಬಹುಮಾನ ಕೊಡಬೇಕಾದರೆ ಇಂಗ್ಲಿಷು ವರ್ಣಮಾಲೆಯ ಕೊನೆಯಿಂದಲೂ ಹೆಸರುಗಳನ್ನು ಆಯುತ್ತೇನೆ. ಅದು ಹೇಗೆಂಬುದನ್ನು

ದಯವಿಟ್ಟು ಕೇಳಿ. ಇಂಗ್ಲಿಷು ವರ್ಣಮಾಲೆಯ ಆದಿಯಿಂದ ಎಂಟನೆಯ ಅಕ್ಷರ H; ಮೊಲಕ್ಕೆ ಇಂಗ್ಲಿಷಿನಲ್ಲಿ HARE ಎನ್ನುತ್ತಾರೆ; H ಎಂಬುದು HARE ಎಂಬುದರ ಮೊದಲನೆಯ ಅಕ್ಷರ; ಆದ್ದರಿಂದ ಇಂಗ್ಲಿಷಿನಲ್ಲಿ HARE ಎನ್ನುವ ಮೊಲಕ್ಕೆ ಮೊದಲನೆಯ ಬಹುಮಾನ. ಹಾಗೆಯೇ ಇಂಗ್ಲಿಷು ವರ್ಣಮಾಲೆಯ ಅಂತ್ಯದಿಂದ ಹಿಂದಕ್ಕೆ ಬಂದರೆ, ಎಂಟನೆಯ ಅಕ್ಷರ S; ಬಸವನ ಹುಳುವಿಗೆ ಇಂಗ್ಲಿಷಿನಲ್ಲಿ SNAIL ಎನ್ನುತ್ತಾರೆ; SNAIL ಎಂಬುದು S ಎಂಬ ಅಕ್ಷರದಿಂದ ಮೊದಲಾಗುತ್ತದೆ; ಆದ್ದರಿಂದ ಇಗ್ಲಿಷಿನಲ್ಲಿ SNAIL ಎನ್ನುವ ಬಸವನ ಹುಳುವಿಗೆ ಎರಡನೆಯ ಬಹುಮಾನ ಬಂತು. ಇದೇ ಕ್ರಮದ ಮೇರೆಗೆ ಮುಂದಿನ ವರ್ಷ I ಎಂಬ ಅಕ್ಷರದಿಂದ ಮೊದಲಾಗುವ ಹೆಸರಿನ ಪ್ರಾಣಿಗೆ ಮೊದಲನೆಯ ಬಹುಮಾನ, R ಎಂಬ ಅಕ್ಷರದಿಂದ ಮೊದಲಾಗುವ ಹೆಸರಿರುವ ಪ್ರಾಣಿಗೆ ಎರಡನೆಯ ಬಹುಮಾನ" ಎಂದು ಒಂದು ದೊಡ್ಡ ಭಾಷಣ ಮಾಡಿತು.

ಅಲ್ಲಿಯೇ ಬಳಿಯಲ್ಲಿದ್ದ ಒಂದು ಹೇಸರಕತ್ತೆ "ನಾನು ಬೇಡ ಬೇಡವೆಂದರೂ ನನ್ನನ್ನು ತೀರ್ಪುಗಾರರ ಸಮಿತಿಯಲ್ಲಿ ಸೇರಿಸಿದರು. ಇಲ್ಲದೆ ಇದ್ದರೆ, ಮೊದಲನೆಯ ಬಹುಮಾನವನ್ನು ನನಗೆ ನಾನೇ ಕೊಟ್ಟುಕೊಳ್ಳುತ್ತಿದ್ದೆ. ಪಂದ್ಯಗಳಲ್ಲಿ ವೇಗವೊಂದೇ ಮುಖ್ಯವಾದುದಲ್ಲ, ಇತರ ಗುಣಗಳಿಗೂ ತಕ್ಕ ಬೆಲೆ ಕೊಡಬೇಕು. ಉದಾಹರಣೆಗೆ, ಪಂದ್ಯಕ್ಕೆ ಸೇರಿದವರು ಎಷ್ಟು ಭಾರ ಎಳೆಯಬಲ್ಲರು ಎಂಬುದನ್ನೂ ಲಕ್ಷಿಸಬೇಕು. ಆದರೆ ನಾನು ಈಗ ಈ ಗುಣವನ್ನಾಗಲಿ, ಮೊಲ ಓಡುವುದರಲ್ಲಿ ಉಪಯೋಗಿಸುವ ಬುದ್ಧಿವಂತಿಕೆಯನ್ನಾಗಲಿ, ಅದು ಯುಕ್ತಿಯಿಂದ ನೆಗೆದು ಕುಪ್ಪಳಿಸುವುದನ್ನಾಗಲಿ, ಅಪಾಯ ಬಂದಾಗ ಅದು ಅವಿತುಕೊಳ್ಳುವುದನ್ನಾಗಲಿ, ನಾನು ಈಗ ಪ್ರಸ್ತಾಪಿಸುವುದಿಲ್ಲ. ಇವುಗಳಿಗಿಂತ ಗಮನಾರ್ಹವಾದುದು ಇನ್ನೊಂದು ಗುಣವಿದೆ. ಅದೊಂದನ್ನು ಮಾತ್ರ ಗಮನಿಸಿಯೇ ತೀರಬೇಕು. ಮನುಷ್ಯರಾದವರು ಆ ವಿಶೇಷಗುಣಕ್ಕೆ ಸೌಂದರ್ಯವೆಂದು ಹೆಸರಿಟ್ಟಿದ್ದಾರೆ. ನಾನು ಆ ಸೌಂದರ್ಯವನ್ನು ಗಮನಿಸಿ ಅದಕ್ಕೆ ಬೆಲೆ ಕೊಡುತ್ತೇನೆ. ಮೊಲದ ಮಾಟವಾದ ಕಿವಿಗಳನ್ನು ನಾನು ರೆಪ್ಪೆಮುಚ್ಚದೆ ಈಕ್ಷಿಸಿದೆ. ಆ ಕಿವಿಗಳು ಎಷ್ಟು ಉದ್ದವಾಗಿ ಬೆಳೆದಿದ್ದವೆಂಬುದನ್ನು ಕಂಡಾಗ ನನಗೆ ನನ್ನ

ಚಿಕ್ಕಂದಿನ ಜ್ಞಾಪಕ ಬಂತು. ಒಡನೆಯೆ ನಿರ್ಯೋಚನೆಯಿಂದ ಮೊಲಕ್ಕೆ ನಾನು ನನ್ನ ಮತವನ್ನು ಒಪ್ಪಿಸಿಬಿಟ್ಟೆ" ಎಂದಿತು.

ಈ ಮಾತುಗಳನ್ನೆಲ್ಲ ಕೇಳುತ್ತ ಅಲ್ಲೇ ಹಾರಾಡುತ್ತಿದ್ದ ನೊಣ "ನನಗೇನೂ ಭಾಷಣ ಮಾಡಬೇಕೆಂಬ ಆಸೆಯಿಲ್ಲ. ನಾನು ಆಡುವ ಎರಡು ಮಾತು ದೊಡ್ಡ ಭಾಷಣವೂ ಅಲ್ಲ. ಆದರೂ ಮೊಲಗಳ ಮಾತು ಬಂದಾಗ ನಾನೂ ನನ್ನ ಅಭಿಪ್ರಾಯವನ್ನು ತಿಳಿಸಬೇಕಾಗಿದೆ. ನಾನೂ ಎಷ್ಟೋಸಲ ಎಷ್ಟೋ ಮೊಲಗಳನ್ನು ಮೀರಿಸಿ ಮುಂದೆ ಹೋಗಿದ್ದೇನೆ, ನಾನು ಸಾಮಾನ್ಯವಾಗಿ ರೈಲ್ವೆ ಎಂಜಿನ್ನಿನ ಮೂತಿಯ ಮೇಲೆ ಕುಳಿತು ಸವಾರಿಮಾಡಿದಾಗ. ನಾನು ಕುಳಿತ ಹಾಗೆ ಎಂಜಿನ್ನಿನ ಮೇಲೆ ಕುಳಿತವರು ತಮ್ಮ ವೇಗವೇನು, ಇತರರ ವೇಗವೇನು ಎಂಬುದನ್ನು ಸುಲಭವಾಗಿ ತಿಳಿಯಬಲ್ಲರು. ಮೊನ್ನೆಮೊನ್ನೆ ತಾನೆ ಒಂದು ಗಡವ ಮೊಲದ ಹಿಂಗಾಲುಗಳನ್ನು ನೆರಿಕಿಹಾಕಿಬಿಟ್ಟೆ. ನಾನು ಕುಳಿತಿದ್ದ ಎಂಜಿನ್ನಿನ ಮುಂದೆ, ನಾನು ಬರುತ್ತಿರುವೆನೆಂಬುದನ್ನು ತಿಳಿಯದೆ, ಕಂಬಿಗಳ ನಡುವೆ ಅದು ಓಡುತ್ತಿತ್ತು. ಆದರೆ ಪಾಪ, ಅದೇನು ಓಡೀತು? ಹಿಂದಿನಿಂದ ಎಂಜಿನ್ ಬಂತು. ಮೊಲದ ಕಾಲಿನ ಮೇಲೆ ಹರಿಯಿತು. ಎಂಜಿನಿನ ಮೇಲೆ ನಾನು ಕುಳಿತಿದ್ದೆ. ನನ್ನ ಭಾರದಿಂದ ಮೊಲದ ಹಿಂದಿನ ಎರಡು ಕಾಲುಗಳೂ ಅಪ್ಪಚ್ಚಿಯಾಗಿಹೋಯಿತು. ಮೊಲ ಅಲ್ಲಿಯೇ ಹಿಂದೆ ಬಿತ್ತು, ನಾನು ಮಾತ್ರ ಎಂಜಿನ್ನಿನ ಮೇಲೆ ಏರಿಕೊಂಡು ಇನ್ನೂ ಮುಂದೆ ಹೋದೆ. ಇದು ಪಂದ್ಯದಲ್ಲಿ ಗೆಲ್ಲುವ ರೀತಿಯೆಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ. ಆದರೂ ನನಗೆ ಮೊದಲ ಬಹುಮಾನ ಕೊಡಬೇಕೆಂದು ನಾನೇನೂ ಕೇಳುವುದಿಲ್ಲ" ಎಂದಿತು.

ಪಕ್ಕದಲ್ಲಿದ್ದ ಕಾಡುಗುಲಾಬಿ "ನನ್ನನ್ನು ಕೇಳಿದರೆ, ಮೊದಲನೆಯ ಬಹುಮಾನವನ್ನು ಸೂರ್ಯನ ಕಿರಣಗಳಿಗೆ ಕೊಡಬೇಕು. ಆ ಗೌರವ ಅದಕ್ಕೇ ಸಲ್ಲಬೇಕು. ನಮಗೂ ಸೂರ್ಯನಿಗೂ ಇರುವ ಆ ಅಗಾಧವಾದ ಅಂತರವನ್ನು ಅದು ಎಷ್ಟು ಶೀಘ್ರವಾಗಿ ದಾಟಿಬರುತ್ತದೆ! ಅಷ್ಟು ದೂರ ಬಂದರೂ, ಅಷ್ಟು ವೇಗವಾಗಿ ಬಂದರೂ, ಅದರ ಶಕ್ತಿ ಏನೂ ಕುಗ್ಗಿರುವುದಿಲ್ಲ! ಅದು ಬಂದು ಮುಟ್ಟಿದೊಡನೆ ಸಮಸ್ತ ಪ್ರಕೃತಿಯೂ ಎಚ್ಚೆತ್ತು,

ಎಷ್ಟು ಚೆಲುವಾಗುತ್ತದೆ! ಎಷ್ಟು ಸುಂದರವಾಗುತ್ತದೆ! ಆ ಕಿರಣಗಳನ್ನು ಕಂಡೊಡನೆ ನಮ್ಮ ಮುಖ ಕೆಂಪಾಗುತ್ತದೆ, ನಮ್ಮ ಉಸಿರು ಪರಿಮಳ ವಾಗುತ್ತದೆ. ಈ ಓಡುವ ಪಂದ್ಯದಲ್ಲಿ ತೀರ್ಪುಕೊಡಲು ಕುಳಿತ ಸಭೆ ಯವರು ಈ ಅಂಶವನ್ನು ಗಮನಿಸಿದ ಹಾಗೆ ಕಾಣುವುದಿಲ್ಲ. ನಾನೇ ನಾದರೂ ಸೂರ್ಯಕಿರಣವಾಗಿದ್ದಿದ್ದರೆ ಇವರಲ್ಲಿ ಪ್ರತಿಯೊಬ್ಬರಿಗೂ ನನ್ನ ತಾಪವನ್ನು ಸ್ವಲ್ಪ ಮುಟ್ಟಿಸುತ್ತಿದ್ದೆ. ಈಗಾಗಲೇ ತಲೆ ತಿರುಗಿಹೋಗಿರುವ ಇವರಿಗೆ ಇನ್ನಷ್ಟು ತಲೆ ತಿರುಗುವ ಹಾಗೆ ಮಾಡುತ್ತಿದ್ದೆ. ಏನಾದರೇನು? ನಮ್ಮ ಈ ಕಾಡೆಲ್ಲ ಸುಖವಾಗಿದ್ದರೆ ಸಾಕು, ಶಾಂತಿಯಿಂದಿದ್ದರೆ ಸಾಕು. ನಾವು ಅರಳಬೇಕು, ಪರಿಮಳ ಸೂಸಬೇಕು, ಬದುಕಬೇಕು. ಕತೆಯಲ್ಲೂ ಕಾವ್ಯದಲ್ಲೂ ನಾವು ಅಮರರಾಗಬೇಕು. ನಮಗೆ ಬಹುಮಾನ ಬಂದರೆಷ್ಟು? ಸೂರ್ಯಕಿರಣಗಳಿಗೆ ಬರದೆ ಹೋದರೆಷ್ಟು? ಸೂರ್ಯಕಿರಣ ನಮ್ಮೆಲ್ಲರಿಗಿಂತ ಚಿರಂಜೀವಿಯಾಗಿ ಅಮರವಾಗಿರತಕ್ಕಂಥದು" ಎಂದುಕೊಂಡಿತು. ಆದರೆ ಆ ಕಾಡುಗುಲಾಬಿ ಮನಸ್ಸಿನಲ್ಲಿ ಹಾಗೆಂದುಕೊಂಡಿತೆ ಹೊರತು ಅದನ್ನು ಬಾಯಿಬಿಟ್ಟು ಹೇಳಲಿಲ್ಲ. ಏಕೆಂದರೆ ಬಾಯಿಬಿಟ್ಟು ಹೇಳಿಕೊಳ್ಳುವುದು ಅದರ ಪ್ರಕೃತಿಗೆ ವಿರುದ್ಧ.

ಆ ವೇಳೆಗೆ ಒಂದು ಮಣ್ಣುಹುಳು, ಅದುವರೆಗೆ ನಿದ್ರೆ ಮಾಡು ತ್ತಿದ್ದುದು, ಆಗ ತಾನೆ ಎಚ್ಚರವಾದದ್ದು, ಕಣ್ಣು ಹೊಸಗಿಕೊಂಡು "ಅದು ಸರಿ, ಮೊದಲನೆಯ ಬಹುಮಾನ ಏನು ಕೊಟ್ಟರು?" ಎಂದು ಕೇಳಿತು.

ಅದಕ್ಕೆ ಉತ್ತರವಾಗಿ ಹೇಸರಗತ್ತೆ "ಕೋಸುಗಡ್ಡೆಯ ತೋಟಕ್ಕೆ ಅಪ್ಪಣೆಯಿಲ್ಲದೆ ನುಗ್ಗಬಹುದು ಎಂಬುದೇ ಮೊದಲನೆಯ ಬಹುಮಾನ. ಇದನ್ನೇ ಕೊಡಬೇಕೆಂದು ಸೂಚಿಸಿದವನು ನಾನು. ಮೊದಲನೆಯ ಬಹುಮಾನವನ್ನು ಮೊಲಕ್ಕೆ ಕೊಡಿಸಿದವನೂ ನಾನೇ. ಆದ್ದರಿಂದ ಯಾವ ಬಹುಮಾನ ಕೊಟ್ಟರೆ ಅದಕ್ಕೆ ಪ್ರಯೋಜನ ಎಂಬುದನ್ನೂ ನಾನೇ ಸೂಚಿ ಸಿದೆ. ಇನ್ನೊಂದು ವರ್ಷಕಾಲ ನಮ್ಮ ಮೊಲ ನಿಶ್ಚಿಂತೆಯಿಂದ ಇರ ಬಹುದು. ಎರಡನೆಯ ಬಹುಮಾನ ಪಡೆದ ನಮ್ಮ ಬಸವನ ಹುಳು ಬೇಲಿಯ ಹತ್ತಿರ ಕುಳಿತು ಕಲ್ಲುಗಳ ಮೇಲಿನ ಪಾಚಿಯನ್ನು ನೆಕ್ಕುತ್ತ,

ಬಿಸಿಲು ಕಾಯಿಸಿಕೊಳ್ಳುತ್ತಿರಲಿ. ಅದನ್ನು ಮುಂದಿನ ವರ್ಷದ ಪಂದ್ಯದಲ್ಲಿ ತೀರ್ಮಾನಕರ ಸಭೆಗೆ ಸದಸ್ಯನನ್ನಾಗಿ ನೇಮಿಸಿದ್ದೇವೆ. ನಾವು ಈ ವರ್ಷ ಪ್ರಾರಂಭಿಸಿರುವ ಈ ಸತ್ಸಂಪ್ರದಾಯವನ್ನು ಮುಂದಿನ ವರ್ಷಗಳಲ್ಲಿ ಇತರರು ನಡೆಸಿಕೊಂಡು ಬರಲಿ ಎಂದು ಹಾರೈಸುತ್ತೇನೆ" ಎಂದಿತು.

# ಲೋಹ ವರಾಹ

ಫ್ಲಾರೆನ್ಸ್ ನಗರದಲ್ಲಿ, ಅಲ್ಲಿನ ಅರಸನ ಅರಮನೆಗೆ ಸ್ವಲ್ಪ ದೂರದಲ್ಲಿ ಒಂದು ಸಣ್ಣ ಬೀದಿಯಿದೆ. ಆ ಬೀದಿಯಲ್ಲಿ, ಕಾಯಿಪಲ್ಯ ಮಾರುವ ಚೌಕದ ಎದುರುಗಡೆ ಒಂದು ಸುಂದರವಾದ ಲೋಹ ವರಾಹದ ವಿಗ್ರಹವಿದೆ. ಅದರ ಮಿರುಗುವ ಕೆಂಬಣ್ಣ ಕಾಲಕ್ರಮದಿಂದ ಹಚ್ಚ ಹಸುರಾಗುತ್ತಿದ್ದರೂ, ಅದರ ಮೂತಿ ಮಾತ್ರ ಇನ್ನೂ ಈಗ ತಾನೆ ತಿಕ್ಕಿ ಉಜ್ಜಿದಂತೆ ಫಳಫಳನೆ ಹೊಳೆಯುತ್ತಿದೆ. ಅದರ ಬಾಯಿಂದ ಧಾರೆಯಾಗಿ ಬೀಳುವ ತಿಳಿನೀರನ್ನು ಕುಡಿಯುವುದಕ್ಕೆ ಬರುವ ನೂರಾರು ಮಕ್ಕಳು ಅದರ ಮೂತಿಯನ್ನು ಕೈಗಳಿಂದ ಹಿಡಿದು, ಬಾಯಿಗೆ ಬಾಯಿಕ್ಕಿ, ಅದರ ಮೆರುಗನ್ನು ಕೆಡದಂತೆ ಕಾಪಾಡಿದ್ದಾರೆ. ಯಾವನಾದರೂ ಅರೆಬೆತ್ತಲೆ ಹುಡುಗ ಆ ವರಾಹದ ತಲೆಯನ್ನು ತಬ್ಬಿಕೊಂಡು, ಅದರ ದಾಡೆಗಳ ಬಳಿ ತನ್ನ ಚೆಂದುಟಿಗಳನ್ನು ಒತ್ತುವ ದೃಶ್ಯ ಒಂದು ಅಪೂರ್ವವಾದ ಚಿತ್ರ. ಫ್ಲಾರೆನ್ಸಿಗೆ ಹೋದವರು ಯಾರು ಬೇಕಾದರೂ ಆ ಸ್ಥಳವನ್ನು ಸುಲಭವಾಗಿ ಕಾಣಬಹುದು. ಲೋಹ ವರಾಹ ಎಲ್ಲಿರುವುದೆಂದು ಯಾವ ಭಿಕ್ಷುಕನನ್ನು ಬೇಕಾದರೂ ಕೇಳಿ, ನಿಮಗೆ ದಾರಿ ತೋರಿಸುತ್ತಾನೆ.

ಒಂದು ಸಲ ಸಂಜೆ, ಚಳಿಗಾಲ. ಬೆಟ್ಟಗಳೆಲ್ಲ ಹಿಮದಿಂದ ಮುಚ್ಚಿಹೋಗಿವೆ. ಆದರೂ ಚಂದ್ರ ತೊಳಗಿ ಬೆಳಗುತ್ತಿದ್ದಾನೆ. ಫ್ಲಾರೆನ್ಸಿನ ಅರಸನ ಅರಮನೆಗೆ ಸೇರಿದ ತೋಟವೊಂದರ ಮೂಲೆಯಲ್ಲಿ, ಸಾವಿರಾರು ಗುಲಾಬಿಗಳು ಅರಳುವ ಕಡೆ, ಒಬ್ಬ ಹರಕು ಬಟ್ಟೆಯ ತಿರುಕಹುಡುಗ ಹಗಲೆಲ್ಲಾ ಕುಳಿತುಕೊಂಡಿದ್ದ. ಹಸಿವಾದರೂ, ಚಳಿಯಾದರೂ ನಗುನಗುತ್ತಿದ್ದ. ಅವನಿಗೋ ಹಸಿವು, ದಾಹ; ಆದರೆ ಯಾರೂ ಅವನಿಗೆ

ಏನೂ ಕೊಡಲಿಲ್ಲ. ಕತ್ತಲೆಯಾದಾಗ, ತೋಟದ ಬಾಗಿಲು ಮುಚ್ಚುವ ವೇಳೆಯಾಯಿತೆಂದು ಕಾವಲಿನವನು ಅವನನ್ನು ಹೊರಕ್ಕೆ ಅಟ್ಟಿಬಿಟ್ಟ. ಹುಡುಗ ಹೊರಗೆ ಬಂದು, ದೂರದಲ್ಲಿ ಹರಿಯುತ್ತಿದ್ದ ಹೊಳೆಯನ್ನೂ, ಅದರ ಮೇಲಿನ ಸೇತುವೆಯನ್ನೂ, ದೂರದ ಆಕಾಶದ ನಕ್ಷತ್ರಗಳನ್ನೂ, ನೀರಿನಲ್ಲಿ ಮಿರುಗುತ್ತಿದ್ದ ಅವುಗಳ ಪ್ರತಿಬಿಂಬವನ್ನೂ ನೋಡುತ್ತ ಹಾಗೇ ನಿಂತ. ಅಲ್ಲಿಂದ ಹೊರಟು, ಲೋಹ ವರಾಹದ ಹತ್ತಿರ ಬಂದು, ಬಗ್ಗಿ, ಅದನ್ನು ತನ್ನ ತೋಳುಗಳಿಂದ ತಬ್ಬಿಕೊಂಡು, ಅದರ ಮಿರುಗುವ ಮೂತಿಗೆ ತುಟಿಯಿಟ್ಟು, ತುಂಬ ತಿಳಿನೀರು ಕುಡಿದ. ಪಕ್ಕದಲ್ಲಿ ಒಂದೆರಡು ಸೊಪ್ಪು, ಒಂದು ಚೂರು ಗೆಣಸು ಬಿದ್ದಿತ್ತು. ಹುಡುಗ ಅದನ್ನು ತಿಂದು ಸುತ್ತಲೂ ನೋಡಿದ. ಬೀದಿಯಲ್ಲಿ ಯಾರೂ ಇರಲಿಲ್ಲ. ಧೈರ್ಯವಾಗಿ ಹೋಗಿ, ಲೋಹ ವರಾಹದ ಬೆನ್ನಿನ ಮೇಲೇರಿ, ಅದರ ತಲೆಯ ಮೇಲೆ ತನ್ನ ಗುಂಗುರುಕೂದಲಿನ ತಲೆಯನ್ನಿಟ್ಟು, ಹಾಗೇ ತನಗೇ ತಿಳಿಯದ ಹಾಗೆ, ಕಣ್ಣು ಮುಚ್ಚಿ ನಿದ್ರೆಹೋದನು.

ನಡುರಾತ್ರಿಯಾಯಿತು. ಲೋಹ ವರಾಹ ಮೆಲ್ಲನೆ ಮೈ ಕೊಡವಿ ಎದ್ದಿತು. "ಮಗು, ಭದ್ರವಾಗಿ ಹಿಡಿದುಕೊ. ಇದೋ ಓಡುತ್ತೇನೆ" ಎಂದು ಅದು ಮನುಷ್ಯರಂತೆ ಮಾತನಾಡಿದ್ದೂ ಅವನಿಗೆ ಸ್ಪಷ್ಟವಾಗಿ ಕೇಳಿಸಿತು. ಹೀಗೆ ಹುಡುಗನಿಗೆ ಎಚ್ಚರ ಕೊಟ್ಟು, ಲೋಹ ವರಾಹ ತನ್ನ ಪೀಠದಿಂದ ಕದಲಿ ಕೆಳಗಿಳಿದು ಓಡಿತು. ಅದು ಪಕ್ಕದ ರಾಜಮಾರ್ಗದಲ್ಲಿದ್ದ ಅರಮನೆಯ ಎದುರಿಗೆ ಬಂದಾಗ, ಅರಮನೆಯ ಎದುರಿಗಿದ್ದ ಹಿಂದಿನ ಮಹಾರಾಜನ ಪ್ರತಿಮೆಯನ್ನು ಹೊತ್ತಿದ್ದ ಲೋಹದ ಕುದುರೆ ಗಟ್ಟಿಯಾಗಿ ಕೆನೆಯಿತು. ಪಕ್ಕದಲ್ಲಿ ಕವಣೆಯನ್ನು ಹಿಡಿದು ಎತ್ತಿದ್ದ ಇನ್ನೊಂದು ಪ್ರತಿಮೆ ಕವಣೆಯನ್ನು ಬೀಸಿತು. ಎಲ್ಲೆಲ್ಲಿ ನೋಡಿದರೂ, ಆ ಲೋಹ ವರಾಹ ಓಡಿಬಂದ ಕಡೆಯಲ್ಲೆಲ್ಲ ಶಿಲೆಯ ಪ್ರತಿಮೆಗಳೂ ಲೋಹದ ಮೂರ್ತಿಗಳೂ ಜೀವಂತವಾಗಿ ಚೈತನ್ಯದಿಂದ ತುಳುಕುತ್ತಿದ್ದುವು. ಮುಂದೆ ರಾಜನ ಸಭಾ ಭವನದ ಹತ್ತಿರ ಬಂದಾಗ ಲೋಹ ವರಾಹ ನಿಂತು, "ಮಗು, ಬಿಗಿಯಾಗಿ ಹಿಡಿದುಕೊ. ಮಹಡಿಯ ಮೆಟ್ಟಲು ಹತ್ತುತ್ತೇನೆ" ಎಂದು ಪುನಃ ಎಚ್ಚರಿಕೆ ಕೊಟ್ಟಿತು.

ಹುಡುಗ ತುಟಿ ಪಿಟಕ್ಕೆನ್ನಲಿಲ್ಲ. ಅವನಿಗೆ ಅರ್ಧ ಆಶ್ಚರ್ಯ, ಅರ್ಧ ಭಯ. ಲೋಹ ವರಾಹ ಮೆಟ್ಟಿಲುಗಳನ್ನು ಹತ್ತಿಕೊಂಡು ಮೇಲೆ ಹೋಯಿತು. ಹುಡುಗ ಅಂತಹ ಭವನವನ್ನು ಅದುವರೆಗೆ ಎಂದೂ ನೋಡಿರಲಿಲ್ಲ. ಸುತ್ತ ಎಲ್ಲಿ ನೋಡಿದರೂ ಗೋಡೆಗಳ ಮೇಲೆ ಸಾಲು ಸಾಲಾಗಿ ಚಿತ್ರವಿಚಿತ್ರವಾದ ಚಿತ್ತಾರಗಳು. ಎಲ್ಲೆಲ್ಲಿ ಕಣ್ಣು ಸುಳಿಸಿದರೆ ಅಲ್ಲಲ್ಲಿ ಸಂದರವಾದ ವಿಗ್ರಹಗಳು, ಪ್ರತಿಮೆಗಳು. ಲೋಹ ವರಾಹ ಆ ಮುಖಶಾಲೆಯನ್ನು ದಾಟಿ, ಪಕ್ಕದ ಒಂದು ವಿಶಾಲವಾದ ಕೊಟಡಿಗೆ ಹೋಯಿತು. ಅಲ್ಲಿ ಒಬ್ಬ ಸುಂದರ ಸ್ತ್ರೀಯ ಪೂರ್ಣಾಕೃತಿಯ ಪ್ರತಿಮೆ ನಿಂತಿತ್ತು. ನೋಡುತ್ತಿದ್ದರೆ, ಆ ಕೋಮಲವಾದ ಅಂಗಾಂಗಗಳು ಚಲಿಸುತ್ತಿವೆಯೋ ಎಂಬಂತಿತ್ತು. ಆಕೆಯ ಕಣ್ಣುಗಳಲ್ಲಿ ಚಿರಯೌವನ ತುಂಬಿ ತುಳುಕುತ್ತಿತ್ತು. ಆಕೆ ರತಿಯೆಂದು ಲೋಕದಲ್ಲಿ ಪ್ರಸಿದ್ಧಳಾಗಿದ್ದಳು. ಅವಳ ಅಕ್ಕಪಕ್ಕದಲ್ಲಿದ್ದ ಪ್ರತಿಮೆಗಳ ರೇಖೆರೇಖೆಗಳಲ್ಲೂ ಜೀವ ಸಂಚಾರ ಮಾಡುವ ಹಾಗಿತ್ತು. ಒಂದು ಕಡೆ ಕತ್ತಿಗಳನ್ನು ಸಾಣೆ ಹಿಡಿಯುವವರು, ಇನ್ನೊಂದು ಕಡೆ ಖಡ್ಗಯುದ್ಧದಲ್ಲಿ ತೊಡಗಿದ್ದ ವೀರರು ಆ ರತಿದೇವಿಯ ಕಟಾಕ್ಷವನ್ನು ಸಂಪಾದಿಸಲು ಯತ್ನಿಸುವಂತಿತ್ತು. ಅದೆಲ್ಲವನ್ನೂ ಕಂಡು ಹುಡುಗನ ಕಣ್ಣು ಕೋರೈಸಿಹೋಯಿತು.

ಹಜಾರದಿಂದ ಹಜಾರಕ್ಕೆ ಹೋದರೆ ಎಲ್ಲೆಲ್ಲಿಯೂ ಸುಂದರವಾದ ಚಿತ್ರಗಳೇ, ಎಲ್ಲೆಲ್ಲಿಯೂ ಸುಂದರವಾದ ವಿಗ್ರಹಗಳೇ. ಪ್ರತಿಯೊಂದು ಚಿತ್ರದ ಮುಂದೆ, ಪ್ರತಿಯೊಂದು ವಿಗ್ರಹದ ಮುಂದೆ, ಆ ಲೋಹ ವರಾಹ ನಿಂತು, "ನೋಡು, ನೋಡು. ಚೆನ್ನಾಗಿ ನೋಡು, ಮಗು" ಎನ್ನುತ್ತಿತ್ತು. ಒಂದು ಚಿತ್ರ ಇನ್ನೊಂದಕ್ಕಿಂತ ಅದ್ಭುತವಾಗಿತ್ತು. ಆದರೆ ಅಲ್ಲಿದ್ದ ಒಂದು ಚಿತ್ರದ ನೆನಪು ಮಾತ್ರ ಹುಡುಗನ ಮನಸ್ಸಿನಲ್ಲಿ ಅಚ್ಚಳಿಯದ ಹಾಗೆ ಅಂಟಿಕೊಂಡಿತು. ಆ ಚಿತ್ರದಲ್ಲಿದ್ದ ಮಕ್ಕಳ ಸುಖವಾದ ಮುಖಗಳನ್ನು ನೋಡಿದವರು ಯಾರೂ ಬೇಗ ಮರೆಯುವಂತಿರಲಿಲ್ಲ. ಯೇಸುಸ್ವಾಮಿ ಪಾತಾಳಕ್ಕೆ ಇಳಿದುಹೋಗಿ ಇಬ್ಬರು ಮಕ್ಕಳನ್ನು ಅಲ್ಲಿಂದ ಉದ್ಧಾರ ಮಾಡಿ ತಂದುದೇ ಆ ಚಿತ್ರದ ವಸ್ತು. "ನಾವು ಸ್ವರ್ಗಕ್ಕೆ ಹೋಗುತ್ತೇವೆ" ಎಂಬ ಅಚಲವಾದ ನಂಬಿಕೆ ಆ ಮಕ್ಕಳ ಮುಖದಲ್ಲಿ ಮುದ್ರಿತವಾಗಿತ್ತು.

ಆ ಚಿತ್ರದ ಮುಂದೆ ಲೋಹ ವರಾಹವು ಮಿಕ್ಕ ಚಿತ್ರಗಳ ಮುಂದೆ ನಿಂತು ದಕ್ಕಿಂತ ಹೆಚ್ಚು ಕಾಲ ನಿಂತಿತು. ಹುಡುಗನಾದರೂ ಮಿಕ್ಕ ಚಿತ್ರಗಳನ್ನು ನೋಡಿದುದಕ್ಕಿಂತ ಹೆಚ್ಚಿನ ಏಕಾಗ್ರಚಿತ್ತತೆಯಿಂದ ಅದನ್ನೇ ದೃಷ್ಟಿಸಿದ.

ಯಾರೋ ನಿಟ್ಟುಸಿರು ಬಿಟ್ಟಹಾಗೆ ಶಬ್ದ ಕೇಳಿಬಂತು. ಯಾರು ಹಾಗೆ ನಿಟ್ಟುಸಿರು ಬಿಟ್ಟದ್ದು? ಲೋಹ ವರಾಹವೆ? ಅಥವಾ ಯೇಸುವಿನ ಚಿತ್ರವೆ? ಹುಡುಗ ಚಿತ್ರದಲ್ಲಿದ್ದ ಆ ಸುಖಮುಖದ ಮಕ್ಕಳ ಕಡೆಗೆ ಪ್ರೇಮ ದಿಂದ ಕೈನೀಡಿದ. ಅನಂತರ ಲೋಹ ವರಾಹ ಅಲ್ಲಿಂದ ಹೊರಟು, ಮೆಟ್ಟಲು ಇಳಿದು, ಓಡಿತು.

"ಲೋಹ ವರಾಹವೆ, ನಿನ್ನ ಈ ಹೊತ್ತಿನ ಉಪಕಾರದ ಋಣವನ್ನು ಹೇಗೆ ತೀರಿಸಬೇಕೋ ನಾನು ಕಾಣೆ" ಎಂದು ಆ ಹುಡುಗ ಕೃತಜ್ಞತೆ ಯಿಂದ ಆ ವರಾಹದ ಕುತ್ತಿಗೆಯನ್ನು ಸವರುತ್ತಾ ಹೇಳಿದ.

"ನಿನ್ನ ಹಾಗೆಯೇ ನನಗೂ ಎನ್ನಿಸುತ್ತದೆ, ಮಗು" ಎಂದಿತು ಲೋಹ ವರಾಹ. "ನಾನು ನಿನಗೆ ಉಪಕಾರಮಾಡಿದ್ದೇನೆ, ನಿಜ. ಆದರೂ ನನಗೆ ನೀನೂ ಉಪಕಾರಮಾಡಿದ್ದೀಯೆ. ಹೇಗೆ, ಗೊತ್ತೆ? ಅಚಲ ವಾದ ಲೋಹ ವರಾಹವಾದ ನನ್ನ ಬೆನ್ನಿನ ಮೇಲೆ ಯಾವನಾದರೂ ನಿಷ್ಕಪಟಿಯಾದ ಮಗು ಏರಿಕೊಂಡಾಗ ಮಾತ್ರ ನನಗೆ ಚಲಿಸುವ ಸಾಮರ್ಥ್ಯವುಂಟಾಗುತ್ತದೆ. ಈಗ ತಾನೇ ನೀನೇ ನೋಡಿದ ಹಾಗೆ ಕತ್ತಲೆಯನ್ನು ಬಿಟ್ಟು ನಾನು ಬೆಳಕಿಗೆ ಬರಬಲ್ಲೆ, ಮೆಟ್ಟಲು ಹತ್ತಬಲ್ಲೆ, ಚಿತ್ರಗಳನ್ನು ಕಣ್ಣಿಂದ ಕಾಣಬಲ್ಲೆ. ಆದರೆ ದೇವಾಲಯದೊಳಗೆ ಮಾತ್ರ ನಾನು ಪ್ರವೇಶಿಸುವಂತಿಲ್ಲ. ಆದರೂ ನೀನು ನನ್ನ ಬೆನ್ನಿನ ಮೇಲಿದ್ದರೆ, ದೇವಾಲಯದ ಬಾಗಿಲ ಕಂಡಿಯಿಂದ ನಾನು ಒಳಗೆ ದಿಟ್ಟಿಸಬಹುದು. ಈಗಾಗಲೆ ಇಳಿದು ಹೋಗಬೇಡ, ಮಗು. ನೀನೇನಾದರೂ ಇಳಿದು ಬಿಟ್ಟರೆ, ನಾನೂ ಇಲ್ಲೇ ಪ್ರತಿಮೆಯಂತೆ ನಿಂತುಬಿಡಬೇಕಾಗುತ್ತದೆ."

"ನೀನು ಹೇಳುವವರೆಗೂ ನಾನು ಇಳಿಯುವುದಿಲ್ಲ." ಎಂದು ಆ ಹುಡುಗ ಅದಕ್ಕೆ ಭರವಸೆ ಕೊಟ್ಟಮೇಲೆ, ಲೋಹ ವರಾಹ ಬಾಣ ಓಡಿದಂತೆ ಓಡಿ, ಆ ಊರಿನ ಮುಖ್ಯ ದೇವಾಲಯವಿದ್ದ ಚೌಕಕ್ಕೆ ಬಂದಿತು. ದೇವಾಲಯದ ಬಾಗಿಲು, ಅದುವರೆಗೆ ಮುಚ್ಚಿಕೊಂಡಿದ್ದದ್ದು,

ತಾನೇ ತಾನಾಗಿ ತೆರೆದುಕೊಂಡಿತು. ಒಳಗಿನ ದೇವಪೀಠದಿಂದ ಬೆಳಕಿನ ಪ್ರವಾಹ ಹೊರಗಿನ ಚೌಕಕ್ಕೆ ಹರಿದುಬಂತು. ಆ ಬೆಳಕಿನ ಅಗಾಧವಾದ ಪ್ರಭೆಯಲ್ಲಿ ದೇವಾಲಯದೊಳಗಿನ ಪ್ರತಿ ಮೂಲೆಯೂ ಪ್ರತಿ ಕಂಬವೂ ಸ್ಪಷ್ಟವಾಗಿ ಕಾಣುತ್ತಿತ್ತು. ಲೋಹ ವರಾಹವೂ ಹುಡುಗನೂ ಬಿಟ್ಟ ಕಣ್ಣು ಮುಚ್ಚದೆ ನೋಡಿದರು. ದೇವಾಲಯದ ಒಳಗಿಂದ ದಿವ್ಯವಾದ ದೇವಗಾನ ಹರಿದು ಬಂತು, ದೇವಯೋಗ್ಯವಾದ ಪರಿಮಳ ಬೀಸಿ ಬಂತು. ಹುಡುಗ ಆ ದೃಶ್ಯಗಳನ್ನು ಕಂಡು, ಆ ಗಾನವನ್ನು ಕೇಳಿ, ಆ ಸುವಾಸನೆಗೆ ವಶನಾಗಿ ತನ್ನ ಎರಡೂ ತೋಳುಗಳನ್ನು ಆ ದೇವಾಲಯದ ಕಡೆಗೆ ನೀಡಿದ. ಅದೇ ಕ್ಷಣದಲ್ಲಿ, ಇವನೆಲ್ಲಿ ಇಳಿದುಬಿಡುವನೋ ಎಂದು ಅಂಜಿದಂತೆ, ಲೋಹ ವರಾಹ ಮುಂದೆ ಓಡತೊಡಗಿದ್ದರಿಂದ ಹುಡುಗ ಅದರ ಕತ್ತಿನ ಕೂದಲನ್ನು ಬಿಗಿಯಾಗಿ ಹಿಡಿದುಕೊಳ್ಳಬೇಕಾಯಿತು. ಚಳಿಗಾಳಿ ಭರ್ರೋ ಎಂದು ಬೀಸಿ ಕಿವಿಗಳನ್ನು ಕೊರೆಯಿತು, ದೇವಾಲಯದ ಬಾಗಿಲುಗಳು ಕಿರ್ರೆಂದು ಶಬ್ದಮಾಡಿಕೊಂಡು ಮುಚ್ಚಿದ ಧ್ವನಿ ಕೇಳಿಸಿತು. ಹುಡುಗನಿಗೆ ಮೈಮೇಲೆ ಎಚ್ಚರ ತಪ್ಪಿದಂತಾಯಿತು. ಮೈಯೊಳಗೆ ಒಂದು ತರಹ ನಡುಕ ಸಂಚಾರವಾಯಿತು. ಅವನಿಗೆ ಎಚ್ಚರವಾಯಿತು.

ಬೆಳಗಾಗಿತ್ತು. ಲೋಹ ವರಾಹ ತನ್ನ ಸ್ವಸ್ಥಾನದಲ್ಲಿ ಬಂದು ನಿಂತಿತ್ತು. ಹುಡುಗನಿಗೆ ಎಚ್ಚರವಾದಾಗ ಅವನು ಅದರ ಬೆನ್ನಿಂದ ಜಾರಿದ್ದ. ಎದ್ದೊಡನೆಯೆ ತನ್ನ ತಾಯನ್ನು ಜ್ಞಾಪಿಸಿಕೊಂಡು ಭಯದಿಂದ ನಡುಗಿದ. ಹಿಂದಿನ ದಿನ ಅವಳು ಎಲ್ಲಿಯಾದರೂ ಭಿಕ್ಷೆ ಬೇಡಿ ಹಣ ಸಂಪಾದಿಸಿಕೊಂಡು ಬಾರೆಂದು ಅವನನ್ನು ಓಡಿಸಿದ್ದಳು. ಹಿಂದಿನ ದಿನ ಅವನಿಗೆ ಹಣವೂ ಸಿಕ್ಕಿರಲಿಲ್ಲ, ಮನೆಗೆ ಹೋಗಲು ಹೆದರಿ ಹಿಂದೆ ಉಳಿದಿದ್ದರಿಂದ ಹೊಟ್ಟೆಗೆ ಅನ್ನವೂ ಸಿಕ್ಕಿರಲಿಲ್ಲ. ಆದರೂ ಮನೆಗೆ ಹೋಗದೆ ಬೇರೆ ಗತಿಯಿಲ್ಲ. ಆದ್ದರಿಂದ ಇನ್ನೊಮ್ಮೆ ಆ ವರಾಹದ ಕುತ್ತಿಗೆಯನ್ನು ತಬ್ಬಿಕೊಂಡು, ಅದರ ಮೂಗಿಗೆ ಮುತ್ತಿಕ್ಕಿ, ಅದನ್ನು ಬೀಳ್ಕೊಂಡು ಹೊರಟನು. ಅವನ ಮನೆ ಇದ್ದುದು ಅಲ್ಲಿಗೆ ಸ್ವಲ್ಪ ದೂರದ ಒಂದು ಓಣಿಯಲ್ಲಿ. ಅಲ್ಲಿ ಒಬ್ಬರು ಬಂದರೆ ಇನ್ನೊಬ್ಬರು ಅರುಗಾಗುವಷ್ಟು ಇಕ್ಕಟ್ಟಾಗಿತ್ತು. ಹುಡುಗ ಆ ಓಣಿಯಲ್ಲಿ ಬಂದು, ಒಂದು ಮುರುಕಲು

ಬಾಗಿಲನ್ನು ತಳ್ಳಿ, ಒಳಗೆ ಕೆಲವು ಮೆಟ್ಟಿಲುಗಳನ್ನು ಹತ್ತಿಹೋದ. ಅಲ್ಲಿ ಒಂದು ಕಡೆ ಕೊಳೆಯಾದ ಹಗ್ಗದ ಮೇಲೆ ನಾಲ್ಕಾರು ಚಿಂದಿ ಬಟ್ಟೆಗಳನ್ನು ಹರಡಿದ್ದರು. ಸುತ್ತ ಎತ್ತಲೂ ಕಸ ಕಡ್ಡಿ. ಹುಡುಗ ಅಲ್ಲಿ ತಿರುಗಿದಾಗ, ಎದುರು ಕಡೆಯಿಂದ ಕುಡಿದವರಿಬ್ಬರು ಅವನನ್ನು ತಳ್ಳಿಕೊಂಡು ಹೋದರು. ಆ ಕುಡಿದವರ ಹಿಂದೆ ಬಂದ ನಡುವಯಸ್ಸಿನ ಹೆಂಗಸೊಬ್ಬಳು ಹುಡುಗನ ಮುಖವನ್ನು ಕಂಡೊಡನೆಯೆ ಹುಬ್ಬು ಗಂಟಿಕ್ಕಿ, "ಎಲ್ಲಿ? ಏನು ಸಂಪಾದಿಸಿಕೊಂಡು ಬಂದಿದ್ದೀಯೆ?" ಎಂದು ಅಬ್ಬರಿಸಿದಳು.

"ಏನೂ ಸಿಕ್ಕಲಿಲ್ಲ, ಅಮ್ಮ. ಹೊಡೆಯಬೇಡಮ್ಮ" ಎಂದು ಹುಡುಗ ಅವಳ ಸೆರಗನ್ನು ಹಿಡಿದು ಬೇಡಿಕೊಂಡ. ಅವಳು ಅಲ್ಲಿ ಏನೂ ಮಾತ ನಾಡದೆ ಕೋಣೆಯೊಳಕ್ಕೆ ಅವನನ್ನು ಎಳೆದುಕೊಂಡು ಹೋಗಿ, "ಎಲ್ಲಿ, ಎಲ್ಲಿ? ಏನು ತಂದಿದ್ದೀಯೋ ಕೊಡು" ಎಂದಳು. ಹುಡುಗ ಏನು ಹೇಳುವುದಕ್ಕೂ ಹೆದರಿ ಅಳತೊಡಗಿದ. ಅವಳು ತುಂಬ ಕೋಪಗೊಂಡು, ಅವನನ್ನು ದೂರ ತಳ್ಳಿದಳು. ಅವನು ಕೆಳಗೆ ಬಿದ್ದ. ಆದರೂ ಅವಳ ಕೋಪ ಶಾಂತವಾಗಲಿಲ್ಲ. ಅವನನ್ನು ಕಾಲಿಂದ ಒದ್ದಳು. ಪುನಃಪುನಃ ಒದ್ದಳು. ಹುಡುಗ ನೋವನ್ನು ತಾಳಲಾರದೆ ಕಿರಿಚಿಕೊಂಡ.

"ಬಾಯಿ ಮುಚ್ಚುತ್ತೀಯೊ, ಕೊಂದು ಬಿಡಲೊ!" ಎಂದು ಅವಳು ರೋಷದಿಂದ ಪಕ್ಕದಲ್ಲಿದ್ದ ಕೆಂಡದ ಮಡಕೆಯನ್ನು ಕೈಗೆತ್ತಿಕೊಂಡಳು. (ಆ ದೇಶದಲ್ಲಿ ಚಳಿ ಹೆಚ್ಚಾಗಿರುವ ಕಾಲದಲ್ಲಿ ಸೆಕೆಕಾಯಿಸಿಕೊಳ್ಳುವುದ ಕ್ಕೋಸ್ಕರ ಮಣ್ಣಿನ ಮಡಕೆಗಳಲ್ಲಿ ಕೆಂಡ ತುಂಬಿ ಇಟ್ಟುಕೊಂಡಿರುತ್ತಾರೆ.) ಅವಳು ಆ ಕೆಂಡದ ಮಡಕೆಯನ್ನು ಹಿಡಿದೆತ್ತಿದೊಡನೆ ಹುಡುಗ ನೆಲದ ಮೇಲೆ ಮುದುರಿಕೊಂಡು, ನಡುಗುತ್ತ, "ಇಲ್ಲಾ! ಇಲ್ಲಾ!" ಎಂದು ಕಿರಿಚಿಕೊಂಡ.

ಪಕ್ಕದ ಕೋಣೆಯಲ್ಲಿದ್ದ ಹೆಂಗಸೊಬ್ಬಳು ಆ ಕೂಗು ಕೇಳಿ ಬಂದಳು. ಅವಳ ಕೈಯಲ್ಲೂ ಒಂದು ಕೆಂಡದ ಮಡಕೆಯಿತ್ತು. ಬಂದವಳು, "ಇದೇನೇ ಇದು? ಮಗುವನ್ನು, ಪಾಪ, ಏನು ಮಾಡುತ್ತಿದ್ದೀ?" ಎಂದಳು.

ಅದಕ್ಕೆ ಆ ತಾಯಿ "ಮಗು ನನ್ನದು. ನಾನು ಏನು ಬೇಕಾದರೂ ಮಾಡುತ್ತೇನೆ. ನಿನಗೇನು? ಅವನನ್ನು ಕೊಂದು ಹಾಕುತ್ತೇನೆ. ನೀನು

ಅಡ್ಡ ಬಂದರೆ, ನಿನ್ನನ್ನೂ ಕೊಂದುಬಿಡುತ್ತೇನೆ" ಎಂದು ಆ ಆವೇಶದಲ್ಲಿ ತನ್ನ ಕೆಂಡದ ಮಡಕೆಯನ್ನು ಎತ್ತಿ ಬೀಸಿದಳು. ಇನ್ನೊಬ್ಬಳು ಅದನ್ನು ತಡೆಯಬೇಕೆಂದು ತನ್ನ ಮಡಕೆಯನ್ನು ಎತ್ತಿದಾಗ ಎರಡು ಮಡಕೆಗಳೂ ಒಂದಕ್ಕೊಂದು ತಗುಲಿ ಎರಡೂ ಒಡೆದುಹೋದುವು. ಕೋಣೆಯ ತುಂಬ ಕೆಂಡ ಬೂದಿ ಚೆಲ್ಲಿ ಕೆದರಿತು. ಹುಡುಗ "ಅಯ್ಯಯ್ಯೋ!" ಎಂದು ಕಿರಿಚಿಕೊಂಡು, ದಡದಡನೆ ಮೆಟ್ಟಿಲಿಳಿದು ಮನೆಯಿಂದ ಓಡಿಹೋದ.

ಪಾಪ, ಹುಡುಗ ಎಷ್ಟು ದೂರ ಓಡಿದನೋ! ಉಸಿರು ತಡೆಯುವ ವರೆಗೂ ಓಡಿದ. ಅವನು ನಿಂತ ಕಡೆ ಎದುರಿಗೆ ಒಂದು ದೇವಾಲಯ. ಅದರ ಬಾಗಿಲು ಹಿಂದಿನ ರಾತ್ರೆ ತೆರೆದಿದ್ದ ಹಾಗೆಯೇ ತೆರೆದಿತ್ತು. ಹುಡುಗ ಒಳಕ್ಕೆ ಹೋದ. ಅಲ್ಲಿ ಎಲ್ಲ ಪ್ರಕಾಶಮಾನವಾಗಿತ್ತು. ಬಲಗಡೆ ಒಂದು ಭವ್ಯವಾದ ಸಮಾಧಿ. ಅದು ಪ್ರಸಿದ್ಧಶಿಲ್ಪಿಯಾದ ಮೈಕೇಲ್ ಎಂಜೇಲೋ ವಿನದು. ಹುಡುಗ ಅದರ ಕಲ್ಲಿಗೆ ತನ್ನ ಮುಖವಿಟ್ಟು, ಬಿಕ್ಕಿ ಬಿಕ್ಕಿ ಅತ್ತ. ದೇವಾಲಯಕ್ಕೆ ಜನ ಬರುತ್ತಿದ್ದರು, ಅಲ್ಲಿಂದ ಹೋಗುತ್ತಿದ್ದರು. ಆದರೂ ಯಾರೂ ಅವನ ಕಡೆ ತಿರುಗಿ ಕೂಡ ನೋಡಲಿಲ್ಲ. ಯಾವನೋ ಒಬ್ಬ ಮುದಿ ಗೃಹಸ್ಥ ಮಾತ್ರ, ಒಂದು ಕ್ಷಣ ನಿಂತು ಅವನನ್ನು ನೋಡಿದ; ಉಳಿದವರ ಹಾಗೆಯೇ ಅವನೂ ಹೋದ. ಹುಡುಗನಿಗೋ ಹಸಿವು, ದಾಹ. ಹಾಗೇ ಸೊರಗಿ ಸೊರಗಿ ಆ ಸಮಾಧಿಯ ಬಳಿ ಸೊಪ್ಪಾಗಿ ಮಲಗಿದ. ಸಾಯಂಕಾಲವಾದಾಗಲೇ ಅವನಿಗೆ ಎಚ್ಚರವಾದದ್ದು. ಯಾರೋ ಅವನ ಅಂಗಿಯ ತೋಳು ಹಿಡಿದು ಎಳೆದ ಹಾಗಾಯಿತು. ಹುಡುಗ ಬೆಚ್ಚಿ ಎದ್ದು, ಮಧ್ಯಾಹ್ನ ತನ್ನನ್ನು ನೋಡಿದ ಮುದಿ ಗೃಹಸ್ಥನನ್ನು ಎದುರಿಗೆ ಕಂಡ.

"ಏಕಪ್ಪ ಹೀಗಿದ್ದೀಯೆ? ನೀನು ಯಾರು? ಬೆಳಗಿನಿಂದ ಇಲ್ಲೇ ಇದ್ದೀಯಾ?" ಎಂದು ಆ ಮುದುಕ ಅವನನ್ನು ಪ್ರಶ್ನಿಸಿ, ಅವನು ಹೇಳಿದ ಉತ್ತರಗಳನ್ನು ಕೇಳಿ, "ಬಾ, ನನ್ನ ಕೂಡ ಬಾ" ಎಂದು ಅವನನ್ನು ಕರೆದುಕೊಂಡು ಹೊರಟ. ಅಲ್ಲಿಗೆ ಸ್ವಲ್ಪ ದೂರದಲ್ಲಿ ಒಂದು ಕೈಚೀಲ ಹೊಲಿಯುವವರ ಅಂಗಡಿ. ಅಲ್ಲಿ ಒಬ್ಬ ಹೆಂಗಸು ಕೈಚೀಲ ಹೊಲಿಯುತ್ತ ಕುಳಿತಿದ್ದಳು. ಅವಳ ಪಕ್ಕದಲ್ಲಿ ಒಂದು ಸಣ್ಣ ನಾಯಿ ಇತ್ತು. ಅದರ ಮೈಮೇಲಿನ ಕೂದಲನ್ನೆಲ್ಲಾ ನುಣ್ಣಗೆ ಬೋಳಿಸಿಬಿಟ್ಟಿದ್ದರು. ಅದರ ಮೈಯ

ಚರ್ಮ ಕೆಂಪಗೆ ಹೊಳೆಯುತ್ತಿತ್ತು. ಹುಡುಗ ಒಳಕ್ಕೆ ಬಂದೊಡನೆ ನಾಯಿ ಎದ್ದು ಅವನ ಸುತ್ತಲೂ ಕುಣಿದಾಡಿತು.

ಆ ಹೆಂಗಸು ಅದನ್ನು ಕಂಡು, ಹುಡುಗನನ್ನೂ ನಾಯನ್ನೂ ಮುದ್ದಿಸಿ, "ಪಾಪ, ಅರಿಯದ ಜೀವಗಳಿಗೆ ಆತ್ಮೀಯತೆ ಎಷ್ಟು ಬೇಗ ಹುಟ್ಟುತ್ತದೆ!" ಎಂದಳು. ಈ ಸದ್ಗೃಹಸ್ಥರು ಆ ಹುಡುಗನಿಗೆ ತಿನ್ನುವುದಕ್ಕೂ ಕುಡಿಯು ವುದಕ್ಕೂ ಕೊಟ್ಟು, ಆ ರಾತ್ರಿ ಅವನನ್ನು ಅಲ್ಲಿಯೇ ಮಲಗಿಕೊಳ್ಳಹೇಳಿದರು. ಮುದುಕ ಮಾರನೆಯ ಬೆಳಗ್ಗೆ ಹೋಗಿ ಆ ಹುಡುಗನ ತಾಯಿಯನ್ನು ಕಂಡು ಮಾತನಾಡಿ ಬರಬೇಕೆಂದುಕೊಂಡ. ಹುಡುಗ ಆ ರಾತ್ರಿ ಅಲ್ಲೇ ಮಲಗಿದ. ರಾತ್ರಿಯೆಲ್ಲ ಅವನಿಗೆ ಆ ಲೋಹ ವರಾಹದ ಕನಸೇ ಕನಸು. ಕನಸಿನ ತುಂಬ ತನಗೆ ಆ ಲೋಹ ವರಾಹ ತೋರಿಸಿದ ಚಿತ್ರಗಳು, ವಿಗ್ರಹಗಳು.

ಮಾರನೆಯ ಬೆಳಗ್ಗೆ ಮುದುಕ ಎದ್ದು ಹೊರಟ. ಅವನು ತನ್ನ ತಾಯನ್ನು ನೋಡಿಕೊಂಡು ಬರಲು ಹೋಗುತ್ತಿದ್ದಾನೆಂದು ಹುಡುಗನಿಗೆ ತಿಳಿಯಿತು. ಎಲ್ಲಿ ತಾನು ಪುನಃ ಹಿಂದಿರುಗಿ ಹೋಗಬೇಕಾಗುತ್ತದೋ ಎಂದು ಅವನಿಗೆ ಅಳು ಬಂತು. ಮುದುಕಿ ಅವನನ್ನು ಸಮಾಧಾನಪಡಿ ಸಿದಳು. ನಾಯಿ ಅವನ ಸುತ್ತ ಕುಣಿದು, ಅವನ ಮುಖವನ್ನು ಮುದ್ದಿಸಿತು. ಅಷ್ಟರೊಳಗೆ ಮುದುಕ ಹಿಂತಿರುಗಿ ಬಂದ. ಅವನು ಹೋದ ಕೆಲಸ ಏನೋ, ಅದು ಏನಾಯಿತೋ ಒಂದೂ ಹುಡುಗನಿಗೆ ತಿಳಿಯಲಿಲ್ಲ. ಆದರೆ ಆ ಮುದುಕ ಮುದುಕಿಯೊಡನೆ ಏನೋ ಮಾತನಾಡಿದ ಮೇಲೆ ಮುದುಕಿ ತಲೆ ದೂಗಿ ಹುಡುಗನ ಕೆನ್ನೆಯನ್ನು ವಿಶ್ವಾಸದಿಂದ ಸವರಿದಳು. ಹುಡುಗನ ಕೈಗಳನ್ನು ಎತ್ತಿಕೊಂಡು, ಅವನ ಬೆರಳುಗಳನ್ನು ನೋಡುತ್ತ, "ಒಳ್ಳೆಯ ಕೈ, ಒಳ್ಳೆಯ ಹುಡುಗ. ಇಲ್ಲೇ ಇರಲಿ. ನಿನ್ನ ಹಾಗೆಯೇ ಸೊಗಸಾಗಿ ಕೈಚೀಲ ಹೊಲಿಯುವುದನ್ನು ಕಲಿಯಲಿ" ಎಂದಳು.

ಅಂದಿನಿಂದ ಹುಡುಗ ಅಲ್ಲೇ ಉಳಿದ. ಮುದುಕಿ ಅವನಿಗೆ ಕೈಚೀಲ ಹೊಲಿಯುವುದನ್ನು ಕಲಿಸಿಕೊಟ್ಟಳು. ಕಾಲಕಾಲಕ್ಕೆ ಊಟ, ನಿದ್ರೆ ದೊರೆತು ಹುಡುಗ ಸುಟಿಯಾದ, ಗೆಲುವಾದ. ಸ್ವಲ್ಪ ದಿನ ಕಳೆದ ಮೇಲೆ ನಾಯಿಮರಿಯನ್ನು ಆಟಕ್ಕಾಗಿ ಕೀಟಲೆ ಮಾಡತೊಡಗಿದ. ಆ ಕಾರಣ ದಿಂದ, ನಾಯಿಮರಿಯನ್ನು ಪ್ರೀತಿಸುತ್ತಿದ್ದ ಮುದುಕಿಗೆ ಕೊಂಚ ಕೋಪ

ಬಂತು. ಅವಳು ಹುಡುಗನನ್ನು ಗದರಿಸಿದಳು, ಹೆದರಿಸಿದಳು. ಹುಡುಗನ ಮುಖ ದುಮ್ಮಾನದಿಂದ ಚಿಕ್ಕದಾಯಿತು. ತನ್ನ ಕೋಣೆಗೆ ಹೋಗಿ, ದುಃಖಿಸಿದ. ಆ ದಿನ ರಾತ್ರೆ ಅವನಿಗೆ ನಿದ್ರೆ ಬರಲಿಲ್ಲ. ಲೋಹ ವರಾಹ ವನ್ನು ನೆನೆಯುತ್ತ ಹಾಗೇ ಮಲಗಿದ್ದ. ಇದ್ದಕ್ಕಿದ್ದ ಹಾಗೆ ಹೊರಗಡೆ ಬೀದಿಯಲ್ಲಿ ಏನೋ ಪಟಪಟ ಹೆಜ್ಜೆಯ ಶಬ್ದವಾದ ಹಾಗಾಯಿತು. ಹುಡುಗ ಛಂಗನೆ ಹಾಸಿಗೆಯಿಂದೆದ್ದು, ಲೋಹ ವರಾಹವಿರಬಹುದೇನೋ ಎಂದು ಕಿಟಕಿಯಿಂದ ನೋಡಿದ. ಬೀದಿಯಲ್ಲಿ ಏನೂ ಕಾಣಿಸಲಿಲ್ಲ.

ಮಾರನೆಯ ಬೆಳಗ್ಗೆ ಅವರ ಮನೆಯ ಪಕ್ಕದ ಮನೆಯವನು ಒಬ್ಬ ಚಿತ್ರಗಾರ ತನ್ನ ಬಣ್ಣದ ಪೆಟ್ಟಿಗೆಯನ್ನೂ ಚಿತ್ರ ಬರೆಯುವ ಹಲಗೆಯನ್ನೂ ಹೊತ್ತುಕೊಂಡು ಹೋಗುತ್ತಿದ್ದ. ಮುದುಕಿ ಹುಡುಗನನ್ನು ಕರೆದು, "ಹೋಗು, ಅವರ ಪೆಟ್ಟಿಗೆ ಹೊತ್ತುಕೊಂಡು ಹೋಗು" ಎಂದಳು. ಹುಡುಗ ಅದರಂತೆಯೇ ಆ ಚಿತ್ರಗಾರನ ಬಣ್ಣದ ಪೆಟ್ಟಿಗೆಯನ್ನು ಹೊತ್ತು ಕೊಂಡು ಹೋದ. ಆ ದಿನ ರಾತ್ರೆ ಲೋಹ ವರಾಹ ತನ್ನನ್ನು ಕರೆದು ಕೊಂಡಿತ್ತಲ್ಲಾ ಆ ಅದೇ ಚಿತ್ರಶಾಲೆಗೆ ಆ ಚಿತ್ರಗಾರನ ಹಿಂದೆ ಹುಡುಗ ಬಂದ. ಅಲ್ಲಿಯ ವಿಗ್ರಹಗಳು, ಅಲ್ಲಿನ ಪ್ರತಿಮೆಗಳು, ಅಲ್ಲಿನ ಆ ರತಿ ದೇವಿಯ ಮೂರ್ತಿ ಇವೆಲ್ಲವನ್ನೂ ಹುಡುಗ ಗುರುತಿಸಿದ. ಯೇಸುಸ್ವಾಮಿ ಪಾತಾಳದಿಂದ ಇಬ್ಬರು ಮಕ್ಕಳನ್ನು ಉದ್ಧಾರಮಾಡಿದ ಚಿತ್ರವನ್ನೂ ಕಂಡ. ಹುಡುಗನಿಗೆ ನಾನು ಸ್ವರ್ಗಕ್ಕೆ ಬಂದಿದ್ದೇನೆ ಎಂಬಂತೆ ಸಂತೋಷವಾಯಿತು. ಅವರು ಆ ಚಿತ್ರದ ಮುಂದೆ ನಿಂತರು.

ಚಿತ್ರಗಾರ ತನ್ನ ಚಿತ್ರದ ಹಲಗೆಯನ್ನು ನಿಲ್ಲಿಸಿ, ಬಣ್ಣಗಳ ಪೆಟ್ಟಿಗೆ ಯನ್ನು ಬಿಚ್ಚಿ, ಬರೆಯುವುದಕ್ಕೆ ತೊಡಗುವ ಮುಂಚೆ "ನೀನು ಇನ್ನು ಹೋಗಬಹುದು" ಎಂದು ಹುಡುಗನಿಗೆ ಹೇಳಿದ.

ಹುಡುಗ "ನೀನು ಬಣ್ಣ ಹಾಕುವುದನ್ನು ನಾನು ನೋಡಬಹುದೆ?" ಎಂದು ಕೇಳಿದ.

ಚಿತ್ರಗಾರ "ನಾನು ಇನ್ನೂ ಈಗಲೇ ಬಣ್ಣ ಹಾಕುವುದಿಲ್ಲ." ಎಂದು, ಒಂದು ಚೂರು ಸೀಮೆಯ ಸುಣ್ಣವನ್ನು ಕೈಗೆತ್ತಿಕೊಂಡು, ಎದುರು ಚಿತ್ರದ ಮೇಲೆ ಕಣ್ಣಾಡಿಸಿ, ಏನೋ ಅಳತೆಮಾಡಿ, ತಾನು ನಿಲ್ಲಿಸಿದ ಚಿತ್ರದ

ಹಲಗೆಗೆ ಅಂಟಿಸಿದ್ದ ಬಟ್ಟೆಯ ಮೇಲೆ ಕೈಯಾಡಿಸಿ, ನಾಲ್ಕು ಗೆರೆ ಎಳೆದ. ಏನಾಶ್ಚರ್ಯ! ಚಿತ್ರಪಟದಲ್ಲಿದ್ದ ಯೇಸುಸ್ವಾಮಿಯ ಛಾಯೆ ಆ ಬಟ್ಟೆಯ ಮೇಲೆ ಬಂದು ನೆಲಸಿತ್ತು.

ಹುಡುಗ ಇನ್ನೂ ಅಲ್ಲಿಯೇ ನಿಂತಿದ್ದನ್ನು ಚಿತ್ರಕಾರ ಕಂಡು, "ಏಕೆ? ಹೋಗು" ಎಂದ. ಹುಡುಗ ಹೋಗಲಾರದೆ ಹೊರಟು, ಮನೆಗೆ ಬಂದ. ಮೇಜಿನ ಮುಂದೆ ಕುಳಿತು ಕೈಚೀಲಗಳನ್ನು ಹೊಲಿಯತೊಡಗಿದ. ಅವನ ಮನಸ್ಸೆಲ್ಲಾ ಚಿತ್ರಶಾಲೆಯಲ್ಲಿತ್ತು; ಆದಕಾರಣ ಅವನ ಹೊಲಿಗೆ ಎಲ್ಲಾ ಕೆಟ್ಟು, ಅನೇಕ ಸಲ ಕೈ ಚುಚ್ಚಿಕೊಂಡ. ಆದರೆ ಆ ದಿನ ಅವನು ನಾಯಿಯನ್ನು ಕೀಟಲೆ ಮಾಡಲಿಲ್ಲ. ಸಂಜೆಯಾಗುವುದನ್ನೇ ಕಾಯುತ್ತಿದ್ದ. ಸಂಜೆಯಾಗಿ, ಕತ್ತಲೆ ಕವಿದ ಕೂಡಲೆ, ಓರೆಯಾಗಿದ್ದ ಬಾಗಿಲಿನಿಂದ ನುಸಿದುಕೊಂಡು ಹೊರಟ. ಶುಭ್ರವಾದ ಆಕಾಶ. ಫಳಫಳ ಮಿನುಗುವ ನಕ್ಷತ್ರ. ಕೊರೆಯುವ ಚಳಿಗಾಳಿ. ದಾರಿಯೋ ನಿರ್ಜನವಾಗಿತ್ತು. ಹುಡುಗ ನೇರವಾಗಿ ಲೋಹ ವರಾಹದ ಬಳಿಗೆ ಬಂದ. ಅದರ ಮಿನುಗುವ ಮೂಗಿಗೆ ಮುತ್ತಿಟ್ಟ. ಅದರ ಬೆನ್ನಿನ ಮೇಲೆ ಏರಿ ಕುಳಿತುಕೊಂಡ. ಅದರ ಕತ್ತನ್ನು ತಬ್ಬಿಕೊಂಡು, "ಆಹಾ, ಸುಖಿಪ್ರಾಣಿ! ನಿನ್ನನ್ನು ಎಂದಿಗೆ ಕಂಡೇನೋ ಎನ್ನಿಸಿಬಿಟ್ಟಿತ್ತು. ಬಾ, ಈ ದಿವಸವೂ ನನ್ನನ್ನು ಏರಿಸಿಕೊಂಡು ಓಡು" ಎಂದನು.

ಆದರೆ ಲೋಹ ವರಾಹ ಅಚಲವಾಗಿತ್ತು, ಅದರ ಬಾಯಿಂದ ಮಾತ್ರ ನೀರು ಧಾರಾಕಾರವಾಗಿ ಪ್ರವಹಿಸುತ್ತಿತ್ತು. ಹುಡುಗ ಅದರ ಆಚೆ ಈಚೆ ಕಾಲು ಬಿಟ್ಟುಕೊಂಡು ಬೆನ್ನಿನ ಮೇಲೆ ಕುಳಿತಿದ್ದಾಗ ಏನೋ ತನ್ನ ಕಾಲ ಬಳಿ ತುಯ್ದುಹಾಗಾಯಿತು. ಬಗ್ಗಿ ಕೆಳಗೆ ನೋಡಿದರೆ, ನಾಯಿಮರಿ ಬಂದು ಅಲ್ಲಿ ನೆಗೆದಾಡುತ್ತ, "ನಾನೂ ಇದೋ ಬಂದಿದ್ದೇನೆ. ನೀನೊಬ್ಬನೇ ಅಲ್ಲಿ ಏನು ಮಾಡುತ್ತಿದ್ದೀಯೆ?" ಎನ್ನುವ ಹಾಗೆ ಬಗುಳುತ್ತಿತ್ತು.

ನಾಯನ್ನು ನೋಡಿದೊಡನೆ ಹುಡುಗನ ಕಣ್ಣು ಭಯದಿಂದ ಅರಳಿತು. ಆ ನಾಯಿಮರಿಯನ್ನು ಅದರ ಒಡತಿಯಾದ ಮುದುಕಿ ಚಳಿಗಾಲದಲ್ಲಿ ಎಂದೂ ಮನೆಯಿಂದ ಹೊರಗೆ ಕಳುಹಿಸುತ್ತಿರಲಿಲ್ಲ. ಕಳುಹಿಸಬೇಕಾದರೆ, ಕುರಿಯ ಚರ್ಮದಿಂದ ಮಾಡಿದ ಒಂದು ಗವುಸಣಿಗೆಯನ್ನು ಅದರ ಮೈಗೆ

ಬೆಚ್ಚಗೆ ತೊಡಿಸಿ ಕಳುಹಿಸುತ್ತಿದ್ದಳು. ಈಗ ಬರಿಮೈಯಲ್ಲಿ, ಕೂದಲು ಕಳೆದ ಬರಿ ಚರ್ಮವನ್ನು ಚಳಿಗೆ ಬಿಟ್ಟುಕೊಂಡು, ಗೌಸಣಿಗೆಯಿಲ್ಲದೆ ನಾಯಿ ತನ್ನ ಹಿಂದೆ ಬಂದುದನ್ನು ಕಂಡರೆ ಗತಿ ಏನು? ಹುಡುಗ ಬಹಳ ಹೆದರಿದ. ಕೊಳ್ಳಿದೆವ್ವವನ್ನು ಕಂಡರೂ ಅವನು ಅಷ್ಟು ಹೆದರುತ್ತಿರಲಿಲ್ಲ. ಒಡನೆಯೆ ಲೋಹ ವರಾಹಕ್ಕೆ ಒಂದು ಮುತ್ತು ಕೊಟ್ಟು, ಕೆಳಗಿಳಿದು, ಆ ಬೆತ್ತಲೆ ನಾಯಿಮರಿಯನ್ನು ಎತ್ತಿಕೊಂಡು, ಅದಕ್ಕೆ ತನ್ನ ಅಂಗಿಯ ಅಂಚನ್ನು ಮರೆಮಾಡಿಕೊಂಡು, ಮನೆಯ ಕಡೆಗೆ ಓಡಿದ.

ದಾರಿಯಲ್ಲಿ ಅವನ ಎದುರಿಗೆ ಬರುತ್ತಿದ್ದ ಇಬ್ಬರು ಪೋಲೀಸಿನವರು ಅವನು ಓಡುತ್ತಿದ್ದುದನ್ನು ಕಂಡರು. ಅದೇ ಗಳಿಗೆಯಲ್ಲಿ ನಾಯಿ ಅಂಗಿಯ ಮರೆಯಿಂದ ಬಗುಳಿತು. ಅವರು ಹುಡುಗನನ್ನು ನಿಲ್ಲಿಸಿ, "ಅದೇನು ಎತ್ತಿಕೊಂಡು ಹಾಗೆ ಓಡಿಹೋಗುತ್ತಿದ್ದೀಯೆ?" ಎಂದು ಅವನನ್ನು ತಡೆದು, "ಓಹೋ! ನಾಯೊ? ಎಲ್ಲಿಂದ ಕದ್ದುಕೊಂಡು ಬಂದೆ?" ಎಂದು ಅದನ್ನು ಕಿತ್ತುಕೊಂಡರು.

ಹುಡುಗ "ಇದು ಕದ್ದುಕೊಂಡು ಬಂದುದಲ್ಲ. ಇದು ನಮ್ಮ ಮನೆಯದೇ. ಚಳಿಯಲ್ಲಿ ಬಂದಿತೆಂದು ಮನೆಗೆ ಎತ್ತಿಕೊಂಡು ಹೋಗುತ್ತಿದ್ದೇನೆ" ಎಂದ.

ಪೋಲೀಸಿನವರು ಅದಕ್ಕೆ ನಗುತ್ತಾ, "ಹಾಗಾದರೆ, ಇದು ನೀನು ಕದ್ದುದಲ್ಲವಾದರೆ, ಇದು ನಿಮ್ಮ ಮನೆಯದೇ ಆದರೆ, ಪೋಲೀಸ್ ಠಾಣೆಗೆ ಯಾರಾದರೂ ದೊಡ್ಡವರನ್ನು ಕಳುಹಿಸು. ಕರೆದುಕೊಂಡು ಹೋಗಲಿ" ಎಂದು ನಾಯನ್ನು ತಮ್ಮೊಡನೆ ಎತ್ತಿಕೊಂಡು ಹೋದರು.

ಹುಡುಗನಿಗೆ ಬಹಳ ಸಂಕಟಕ್ಕಿಟ್ಟುಕೊಂಡಿತು. ಮನೆಗೆ ಹೋಗುವಂತಿಲ್ಲ, ಹೋಗದೆ ನಿಲ್ಲುವಂತಿಲ್ಲ. "ಎಲ್ಲಿಯಾದರೂ ಕಾಲುವೆಗೆ ಬಿದ್ದು ಜೀವ ಬಿಟ್ಟುಬಿಡಲೆ" ಎಂದೆನ್ನಿಸಿತು. "ಇಲ್ಲ, ಇಲ್ಲ. ಮನೆಗೆ ಹೋಗಿ ಹೇಳಿಬಿಡುತ್ತೇನೆ. ನನ್ನನ್ನು ಕೊಂದರೂ ಸರಿಯೆ, ನನಗೆ ಏನು ಶಿಕ್ಷೆ ವಿಧಿಸಿದರೂ ತೀರದು!" ಎಂದು ತನ್ನನ್ನು ತಾನೇ ನಿಂದಿಸಿಕೊಂಡು, "ನನ್ನನ್ನು ಕೊಂದರೂ ಸಂತೋಷವೆ. ನಾನು ಸತ್ತರೆ, ನಾನೂ ಸ್ವರ್ಗಕ್ಕೆ ಹೋಗುತ್ತೇನೆ" ಎಂದು ಸಮಾಧಾನ ಮಾಡಿಕೊಂಡು ಮನೆಗೆ ಹೋದ.

ಮನೆಯ ಬಾಗಿಲು ಹಾಕಿತ್ತು. ಚಿಲಕ ಮೇಲಿದ್ದುದರಿಂದ ಕೈಗೆ ಎಟುಕಲಿಲ್ಲ. ಆದ್ದರಿಂದ ಬೀದಿಯಲ್ಲಿ ಬಿದ್ದಿದ್ದ ಒಂದು ಕಲ್ಲನ್ನು ಕೈಗೆತ್ತಿ ಕೊಂಡು, ಅದರಿಂದ ಬಾಗಿಲನ್ನು ಕುಟ್ಟಿದ.

"ಯಾರು ?" ಎಂದು ಮನೆಯ ಒಳಗಿನಿಂದ ಯಾರೋ ಕೂಗಿದರು.

"ನಾನು. ನಾಯಿಮರಿಯನ್ನು ಪೋಲೀಸಿನವರು ಎತ್ತಿಕೊಂಡು ಹೋದರು." ಎಂದು ಹುಡುಗ ಅಳುತ್ತಾ ಹೇಳಿದ.

ಮನೆಯೊಳಗೆ ಗಲಭೆಯೋ ಗಲಭೆಯಾಯಿತು. ಕೈಚೀಲ ಹೊಲಿಯುವ ಮುದುಕಿ ಗೋಡೆಯ ಕಡೆ ನೋಡಿದಳು. ನಾಯಿಮರಿಗೆ ಹೊದಿಸುತ್ತಿದ್ದ ಕುರಿಯ ಚರ್ಮದ ಗವುಸಣಿಗೆ ಅಲ್ಲೇ ಮೊಳೆಗೆ ತೂಗು ಹಾಕಿತ್ತು.

"ಅಯ್ಯೋ ಪಾಪಿ! ಈ ಸುಡುಗಾಡು ಚಳಿಯಲ್ಲಿ ಆ ನಾಯಿಮರಿಯನ್ನು ಎಳೆದುಕೊಂಡು ಹೋಗಿ ಪೋಲೀಸರ ವಶಪಡಿಸಿದೆಯಾ! ಪಾಪೀ! ಆ ಪೋಲೀಸಿನವರು ಅದನ್ನು ಏನು ಹಿಂಸೆ ಪಡಿಸುತ್ತಾರೋ ಕಾಣೆನಲ್ಲ! ಆ ನಾಯಿ ಚಳಿಯಲ್ಲಿ ಏನು ನಡುಗಿ ಸಾಯುತ್ತದೋ ಕಾಣೆನಲ್ಲ!" ಎಂದು ಮುದುಕಿ ಗೋಳಾಡಿದಳು.

ಮುದುಕಿಯ ಗಂಡ ಕೂಡಲೆ ಆ ಗವುಸಣಿಗೆಯನ್ನು ಎತ್ತಿಕೊಂಡು ಪೋಲೀಸು ಠಾಣೆಗೆ ಹೊರಟ. ಮನೆಯೊಳಗೆ ಮುದುಕಿ ಗೋಳಾಡುತ್ತಿದ್ದಳು. ಮನೆಯ ಹೊರಗೆ ಹುಡುಗ ಅಳುತ್ತಾ ನಿಂತಿದ್ದ. ಆ ಗದ್ದಲವನ್ನು ಕೇಳಿ, ಅಕ್ಕಪಕ್ಕದಲ್ಲಿದ್ದವರೆಲ್ಲ ಎದ್ದು ಬಂದರು. ಅವರಲ್ಲಿ ಪಕ್ಕದ ಮನೆಯ ಚಿತ್ರಗಾರನೂ ಒಬ್ಬ. ಅವನು ಆ ಹುಡುಗನನ್ನು ಕರೆದು ಹತ್ತಿರ ಕುಳ್ಳಿರಿಸಿಕೊಂಡು ಅವನನ್ನು ಪ್ರಶ್ನಿಸಿದ. ಹುಡುಗ ಬಿಕ್ಕಿ ಬಿಕ್ಕಿ ಅಳುತ್ತಾ ಅರ್ಧಂರ್ಧ ಮಾತುಗಳಲ್ಲಿ ಲೋಹ ವರಾಹದ ಕಥೆಯನ್ನೂ ಅದು ತನ್ನನ್ನು ಬೆನ್ನಮೇಲೇರಿಸಿಕೊಂಡು ಚಿತ್ರಶಾಲೆಯಲ್ಲಿ ತಿರುಗಾಡಿಸಿದುದನ್ನೂ ಹೇಳಿದ. ಚಿತ್ರಕಾರನಿಗೆ ಅವನು ಹೇಳಿದುದು ಸ್ಪಷ್ಟವಾಗಿ ಅರ್ಥವಾಗದಿದ್ದರೂ, ಅವನು ಹುಡುಗನನ್ನು ಸಂತೈಸಿ, ಮುದುಕಿಯ ಕೋಪವನ್ನು ಶಮನಮಾಡಲು ಪ್ರಯತ್ನಿಸಿದ. ಆದರೆ ನಾಯಿ ಮನೆಗೆ ಬಂದು ಸೇರುವವರೆಗೂ ಅವಳ ಕೋಪ ಆರುವಂತಿರಲಿಲ್ಲ.

ಮುದುಕ ಹೋಗಿ ನಾಯನ್ನು ಎತ್ತಿಕೊಂಡು ಬಂದ ಮೇಲೆ ಅವಳ ಕೋಪ ಶಮನವಾಯಿತು. ಚಿತ್ರಕಾರ ಹುಡುಗನನ್ನು ಮುದ್ದಿಸಿ, ಅವನಿಗೆ ಹಲವಾರು ಚಿತ್ರಗಳನ್ನು ಕೊಟ್ಟ. ಓ! ಎಂಥ ಸುಂದರವಾದ ಚಿತ್ರಗಳು! ಎಂಥ ವಿನೋದಕರವಾದ ಮುಖಗಳು! ಓ! ಲೋಹ ವರಾಹದ ಚಿತ್ರವೂ ಅಲ್ಲಿತ್ತು! ಕೇವಲ ನಾಲ್ಕಾರು ಗೆರೆಗಳಲ್ಲಿಯೇ ಲೋಹ ವರಾಹ ಕಾಗದದ ಮೇಲೆ ಪ್ರತ್ಯಕ್ಷವಾಗಿತ್ತು. ಅದರ ಪಕ್ಕದ ಮೆಟ್ಟಿಲು, ಅದರ ಹಿಂದಿನ ಭವನ, ಇವು ಕೂಡ ಚಿತ್ರದಲ್ಲಿ ಮೂಡಿತ್ತು. "ಓ! ನನಗೂ ಚಿತ್ರ ಬರೆಯುವುದಕ್ಕೆ ಬಂದರೆ!" ಎಂದು ಹುಡುಗ ಎಂದುಕೊಂಡ.

ಮಾರನೆಯ ದಿವಸ ವಿರಾಮ ದೊರೆತ ಮೊದಲನೆಯ ಕ್ಷಣ ಹುಡುಗ ಒಂದು ಸೀಸದ ಕಡ್ಡಿಯನ್ನು ಎತ್ತಿಕೊಂಡು, ಚಿತ್ರಕಾರನು ಕೊಟ್ಟ ಒಂದು ಚಿತ್ರದ ಹಿಂದುಗಡೆ ತಾನೂ ಲೋಹ ವರಾಹವನ್ನು ಬರೆಯಲು ಯತ್ನಿಸಿದ. ಬರೆದ. ಸ್ವಲ್ಪ ವಕ್ರವಕ್ರವಾಗಿತ್ತು, ಸ್ವಲ್ಪ ಸೊಟ್ಟಸೊಟ್ಟಾಗಿತ್ತು, ಒಂದು ಕಾಲಿಗಿಂತ ಒಂದು ಕಾಲು ದಪ್ಪವಾಗಿತ್ತು. ಆದರೂ ಚಿತ್ರವನ್ನು ನೋಡಿದರೆ "ಇದು ಲೋಹ ವರಾಹದ ಪ್ರತಿ" ಎಂದು ಹೇಳುವ ಹಾಗಿತ್ತು. ತನ್ನ ಮೊದಲನೆಯ ಚಿತ್ರವನ್ನು ನೋಡಿ ಹುಡುಗನಿಗೆ ತುಂಬ ಸಂತೋಷ ವಾಯಿತು.

ಮಾರನೆಯ ದಿನ ಆ ಚಿತ್ರದ ಪಕ್ಕದಲ್ಲಿ ಅದೇ ಚಿತ್ರವನ್ನು ಇನ್ನೊಂದು ಸಲ ಬರೆದ. ಹಿಂದಿನ ದಿನ ಬರೆದುದಕ್ಕಿಂತ ನೂರು ಪಾಲು ಚೆನ್ನಾಗಿ ಬಂದಿತ್ತು. ಮೂರನೆಯ ಸಲ ಬರೆದ, ಮತ್ತೂ ಚೆನ್ನಾಯಿತು.

ದಿನ ಕಳೆದ ಹಾಗೆಲ್ಲ ಹುಡುಗನ ಕೈಚೀಲ ಹೊಲಿಯುವ ಕೆಲಸ ನಿಧಾನವಾಗುತ್ತ ಬಂತು. ಹೊಲಿಯುವುದಕ್ಕೆ ಬಂದು ಕುಳಿತ ಕೈಚೀಲ ಗಳು ರಾಶಿರಾಶಿಯಾಗಿ ಹಾಗೆ ನಿಂತವು. ಲೋಹ ವರಾಹವನ್ನು ಕಾಗದದ ಮೇಲೆ ಬರೆದ ಹಾಗೆಯೇ ಯಾವುದನ್ನಾದರೂ ಕಾಗದದ ಮೇಲೆ ಚಿತ್ರಿಸ ಬಹುದೆಂಬುದನ್ನು ಹುಡುಗ ಕಂಡುಕೊಂಡಿದ್ದ. ಆ ಊರಿನ ನ್ಯಾಯಾ ಸ್ಥಾನದ ಮುಂಭಾಗದ ಒಂದು ಕಂಬದ ಮೇಲೆ ನ್ಯಾಯದೇವತೆ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು, ಕೈಯಲ್ಲಿ ತಕ್ಕಡಿ ಹಿಡಿದು, ನ್ಯಾಯಾನ್ಯಾಯಗಳನ್ನು ತೂಗುತ್ತಿದ್ದುದು ಹುಡುಗನ ಕೈಯಿಂದ ಚಿತ್ರವಾಗಿ ಕಾಗದದ ಮೇಲೆ

ಬಂತು. ಹೀಗೇ ದಿನದಿನಕ್ಕೆ ಅವನ ಚಿತ್ರಸಂಗ್ರಹ ಬೆಳೆಯಿತು. ಆದರೂ ಅದುವರೆಗೆ ಅವನು ಚಿತ್ರಿಸಿದುದು ಎಲ್ಲಾ ಅಚೇತನವಾದ ವಸ್ತುಗಳು ಮಾತ್ರ.

ಹೀಗಿರುವಾಗ ಒಂದು ದಿನ ನಾಯಿಮರಿ ಅವನ ಎದುರಿಗೆ ನೆಗೆಯುತ್ತ ಬಂತು. ಹುಡುಗ "ಒಂದು ನಿಮಿಷ ಸುಮ್ಮನೆ ನಿಲ್ಲು, ನಾಯಿಮರಿ. ನಿನ್ನ ಚಿತ್ರವನ್ನು ಸೊಗಸಾಗಿ ಬರೆದು, ನನ್ನ ಸಂಗ್ರಹದಲ್ಲಿ ಸೇರಿಸುತ್ತೇನೆ" ಎಂದು ಅದನ್ನು ನಿಲ್ಲಿಸಿದ. ಆದರೆ ನಾಯಿಮರಿ ಒಂದು ಕ್ಷಣವಾದರೂ ಸುಮ್ಮನೆ ನಿಲ್ಲಬೇಕಲ್ಲ! ಅದಕ್ಕಾಗಿ ಹುಡುಗ ಅದರ ಕಾಲುಗಳನ್ನು ಬಿಗಿಯಾಗಿ ಕಟ್ಟಿದ, ತಲೆ ಬಾಲಗಳನ್ನು ಸೇರಿಸಿ ಕಟ್ಟಿದ. ಆದರೂ ಆ ನಾಯಿಮರಿ ಸುಮ್ಮನೆ ನಿಲ್ಲದೆ ಹೋಯಿತು. ನೆಗೆದು ನೆಗೆದು ಅದರ ಕಟ್ಟುಗಳು ಇನ್ನೂ ಬಿಗಿಯಾದವು. ಸುಮ್ಮನೆ ಬಗುಳಿತು. ಅದು ಬಗುಳಿದುದನ್ನು ಕೇಳಿ ಮುದುಕಿ ಓಡಿಬಂದಳು. ನಾಯಿಯ ಅವಸ್ಥೆಯನ್ನು ಕಂಡಳು.

"ಅಯ್ಯೋ ಪಾಪಿ! ಅನ್ನ ಕೊಟ್ಟು, ಬಟ್ಟೆ ಕೊಟ್ಟು ನಿನ್ನನ್ನು ಸಾಕಿದುದಕ್ಕೆ ಇದೇ ನೀನು ಮಾಡುವ ಉಪಕಾರ? ಕೃತಘ್ನ!" ಎಂದು ಅವನನ್ನು ಒಂದು ಕಡೆಗೆ ತಳ್ಳಿ, ಒದೆದು, ನಾಯಿಯ ಕಟ್ಟುಗಳನ್ನು ಬಿಚ್ಚಿ, ಕಣ್ಣೀರು ಸುರಿಸುತ್ತಾ ಅದನ್ನು ಎತ್ತಿಕೊಂಡು ಮುದ್ದಾಡುತ್ತಿದ್ದಾಗ ಪಕ್ಕದ ಮನೆಯ ಚಿತ್ರಕಾರ ಆ ಕೊಟಡಿಯೊಳಕ್ಕೆ ಬಂದ.

* * *

೧೮೩೩ನೇ ಇಸವಿಯಲ್ಲಿ ಫ್ಲಾರೆನ್ಸಿನ ಕಲಾಮಂದಿರದವರು ಒಂದು ಪ್ರದರ್ಶನವನ್ನು ಏರ್ಪಡಿಸಿದ್ದರು. ಆ ಪ್ರದರ್ಶನದಲ್ಲಿ ಎರಡು ಚಿತ್ರಗಳು, ಒಂದರ ಪಕ್ಕದಲ್ಲಿ ಒಂದು ಇದ್ದವು, ಅನೇಕರನ್ನು ಆಕರ್ಷಿಸಿದುವು. ಆ ಎರಡರಲ್ಲಿ ಚಿಕ್ಕದಾಗಿದ್ದ ಚಿತ್ರದಲ್ಲಿ ಒಬ್ಬ ಹುಡುಗ ಮೇಜಿನ ಮುಂದೆ ಕುಳಿತು ಚಿತ್ರ ಬರೆಯುತ್ತಿದ್ದ; ಅವನ ಎದುರಿಗೆ ಮೈಯೆಲ್ಲ ನುಣ್ಣಗೆ ಬೋಳಿಸಿದ ಒಂದು ನಾಯಿಮರಿ; ಅದು ಅಲುಗದೆ ನಿಲ್ಲದ ಕಾರಣ, ಅದರ ತಲೆಬಾಲಗಳನ್ನು ದಾರದಿಂದ ಕೂಡಿಸಿ ಕಟ್ಟಲಾಗಿತ್ತು. ಆ ಚಿತ್ರ

ದಲ್ಲಿ ಕಾಣುತ್ತಿದ್ದ ಸಹಜತೆ, ತುಂಬುಜೀವ ಅನೇಕರ ಮನಸ್ಸನ್ನು ಆಕರ್ಷಿಸಿತು. ಆ ಚಿತ್ರವನ್ನು ಬರೆದವನು ಇನ್ನೂ ಚಿಕ್ಕ ಹುಡುಗನಂತೆ; ಯಾವನೋ ಕೈಚೀಲ ಹೊಲಿಯುವ ಮುದುಕನೊಬ್ಬ ಬೀದಿಯ ಭಿಕಾರಿಯಾಗಿದ್ದ ಆ ಹುಡುಗನನ್ನು ತನ್ನ ಮನೆಗೆ ತಂದು ಕಾಪಾಡಿ ಬೆಳಸಿದನಂತೆ. ಹುಡುಗ ಬೇರೆ ಯಾವ ಗುರುವೂ ಇಲ್ಲದೆ ತನಗೆ ತಾನೇ ಚಿತ್ರ ಬರೆಯುವುದನ್ನು ಕಲಿತನಂತೆ. ಆ ಹುಡುಗ ತನ್ನ ಮನೆಯೊಡತಿಯ ನಾಯಿಯನ್ನು ತನ್ನ ಚಿತ್ರಕ್ಕೆ ಮಾದರಿಯಾಗಿ ನಿಲ್ಲಿಸಿಕೊಳ್ಳಬೇಕೆಂದು ಇಷ್ಟಪಟ್ಟು, ಅದು ಚಲಿಸದಂತೆ ಅದರ ಕಾಲು ಕಟ್ಟಿದಾಗ, ಮನೆಯೊಡತಿ ಅವನ ಮೇಲೆ ಕೋಪಗೊಂಡು ಅವನನ್ನು ಮನೆಬಿಟ್ಟು ಓಡಿಸುತ್ತಿದ್ದ ವೇಳೆಯಲ್ಲಿ ಒಬ್ಬ ಚಿತ್ರಕಾರ ಅವನ ಕಲಾಪ್ರತಿಭೆಯನ್ನು ಕಂಡುಕೊಂಡನಂತೆ.

ಹೀಗೆ ಆ ಕೈಚೀಲ ಹೊಲಿಯುವವನು ಆಶ್ರಯ ಕೊಟ್ಟು ಕಾಪಾಡಿದ ಬಡಹುಡುಗ ಮಹಾ ಚಿತ್ರಕಾರನೆಂಬುದು ಆ ಚಿತ್ರದಿಂದ ವ್ಯಕ್ತವಾಗುತ್ತಿತ್ತು. ಆದರೆ ಆ ಚಿತ್ರದ ಪಕ್ಕದಲ್ಲಿದ್ದ ಇನ್ನೊಂದು ದೊಡ್ಡ ಚಿತ್ರ ಅವನ ಕಲೆಯ ಮಹೋನ್ನತಿಗೆ ಇನ್ನೂ ಹೆಚ್ಚಿನ ಸಾಕ್ಷಿಯಾಗಿತ್ತು. ಆ ಚಿತ್ರದಲ್ಲಿ ಒಬ್ಬ ಬಡಹುಡುಗ, ಚಿಂದಿ ಬಟ್ಟೆಗಳನ್ನು ಧರಿಸಿದ್ದ ಮುದ್ದಾದ ಹುಡುಗ, ಫ್ಲಾರೆನ್ಸ್ ನಗರದ ಲೋಹ ವರಾಹವನ್ನು ಒರಗಿಕೊಂಡು ನಿದ್ರೆಮಾಡುತ್ತಿದ್ದ. ಆ ಸ್ಥಳ ಎಲ್ಲರಿಗೂ ಪರಿಚಿತವಾದದ್ದೇ. ಹುಡುಗ ಆ ವರಾಹದ ಕುತ್ತಿಗೆಯ ಸುತ್ತ ಕೈ ಬಿಗಿದು ತಬ್ಬಿಕೊಂಡಿದ್ದ. ಮೇಲಿನ ಬೀದಿಯ ದೀಪ ಆ ಹುಡುಗನ ಮುಖದ ಮೇಲೆ ಮೃದುವಾದ, ಹಿತವಾದ ಬೆಳಕನ್ನು ಚೆಲ್ಲಿತ್ತು. ಇಂತಹ ಆ ಸುಂದರವಾದ ಚಿತ್ರಕ್ಕೆ ಒಂದು ಅಲಂಕಾರದ ಚೌಕಟ್ಟು. ಆ ಚೌಕಟ್ಟಿನ ಒಂದು ಮೂಲೆಯಲ್ಲಿ ಒಂದು ದೊಡ್ಡ ಹೂವಿನ ಹಾರ. ಆ ಹಾರದಲ್ಲಿ ಹೆಣೆದಿದ್ದ ಹಸುರು ಎಲೆಗಳ ನಡುವೆ ಕಂಡೂ ಕಾಣದ ಹಾಗೆ ದುಃಖಸೂಚಕವಾದ ಕರಿಯ ಬಣ್ಣದ ವಸ್ತ್ರವನ್ನು ಕುಚ್ಚು ಕಟ್ಟಿದ್ದರು. ಏಕೆಂದರೆ, ಕೆಲವು ದಿವಸಗಳ ಹಿಂದೆ ತಾನೆ ಆ ಚಿತ್ರವನ್ನು ಬರೆದ ಚಿತ್ರಕಾರ—ತೀರಿಕೊಂಡಿದ್ದ.

# ಸಗಣಿಹುಳುವಿನ ಲೋಕಸಂಚಾರ

ಹಿಂದೆ ಒಂದಾನೊಂದು ಕಾಲದಲ್ಲಿ ಒಬ್ಬಾನೊಬ್ಬ ಚಕ್ರವರ್ತಿ ತನ್ನ ಕುದುರೆಗೆ ಚಿನ್ನದ ಲಾಳ ಕಟ್ಟಿಸಿ, ಅದರ ಒಂದೊಂದು ಕಾಲಿಗೂ ಒಂದೊಂದು ಚಿನ್ನದ ಎಕ್ಕಡ ಮಾಡಿಸಿಕೊಟ್ಟಿದ್ದ. ಚಕ್ರವರ್ತಿ ಆ ಕುದುರೆಗೆ ಇಷ್ಟೆಲ್ಲಾ ಏಕೆ ಮಾಡಿದನೆಂದರೆ– ಆ ಕುದುರೆ ಅಷ್ಟು ಸುಂದರವಾಗಿತ್ತು. ಅದರ ಕೃಶವಾದ ಕಾಲುಗಳೂ ಜಾಣತನವನ್ನು ತುಳುಕುವ ಮಿಂಚಿನ ಕಣ್ಣುಗಳೂ ಅದರ ಕುತ್ತಿಗೆಯ ದಟ್ಟವಾದ ಕೂದಲೂ ಕಣ್ಣಿಗೆ ಒಂದು ಹಬ್ಬ ವಾಗಿತ್ತು. ಅದು ಚಕ್ರವರ್ತಿಯನ್ನು ಯುದ್ಧಭೂಮಿಗೆ ಹೊತ್ತುಕೊಂಡು ಹೋಗಿ, ಸಿಡಿಮದ್ದುಗಳಿಗೆ ಸಿಕ್ಕದ ಹಾಗೆ, ಸಿಳ್ಳನೆ ಹಾಯುವ ಗುಂಡುಗಳಿಗೆ ತಾಕದ ಹಾಗೆ, ಅವನನ್ನು ಸುರಕ್ಷಿತವಾಗಿ ಕರೆದುಕೊಂಡು ಬಂದಿತ್ತು. ಶತ್ರುಗಳ ನಡುವೆ ನುಗ್ಗಿ, ಅವರನ್ನು ಕಚ್ಚಿ, ಒದೆದು, ಯುದ್ಧದಲ್ಲಿ ತಾನೂ ಕಾರ್ಯರೂಪವಾದ ಸಹಾಯವನ್ನು ಮಾಡಿತ್ತು. ಹೀಗೆ ಆ ಕುದುರೆ ಅನೇಕ ವಿಧದಲ್ಲಿ ನೆರವಾಗಿ ಚಕ್ರವರ್ತಿಯ ಜೀವವನ್ನೂ ಚಕ್ರವರ್ತಿಯ ಸಾಮ್ರಾಜ್ಯವನ್ನೂ ಉಳಿಸಿಕೊಟ್ಟಿತ್ತು. ಇಂತಹ ಅಮೂಲ್ಯವಾದ ಕುದುರೆಗೆ ಚಕ್ರವರ್ತಿ ಚಿನ್ನದ ಲಾಳವನ್ನು ಕಟ್ಟಿಸಿ, ಕಾಲಿಗೆ ಚಿನ್ನದ ಎಕ್ಕಡಗಳನ್ನು ಮಾಡಿಸಿ ಕೊಟ್ಟಿದ್ದರಲ್ಲಿ ಏನು ಆಶ್ಚರ್ಯ!

ಒಂದು ದಿನ ಆ ಕುದುರೆಗೆ ಲಾಳ ಕಟ್ಟುತ್ತಿದ್ದಾಗ ಅದೇ ಕುದುರೆಯ ಲಾಯದಲ್ಲಿ ಇದ್ದ ಒಂದು ಸಗಣಿಯುಹುಳು ಲಾಳ ಕಟ್ಟುವವನ ಎದುರಿಗೆ ಬಂದು, "ಸಣ್ಣವರಿಗಿಂತ ಮೊದಲು ದೊಡ್ಡವರನ್ನು ಗಮನಿಸಬೇಕಾದುದು ನ್ಯಾಯವೇ ಹೌದು. ಆದರೆ ಆಕಾರ ದೊಡ್ಡದಾದ ಮಾತ್ರಕ್ಕೇ ಯಾರೂ

ಅಷ್ಟರಿಂದಲೇ ದೊಡ್ಡವರಾಗುವುದಿಲ್ಲ" ಎಂದು ತನ್ನ ಕಡ್ಡಿಯಂತಿದ್ದ ಕಾಲನ್ನು ಮುಂದೆ ಚಾಚಿತು.

ಲಾಳ ಕಟ್ಟುವವನು "ನಿನಗೆ ಏನು ಬೇಕು?" ಎಂದ.

ಸಗಣಿಹುಳು "ನನಗೂ ಚಿನ್ನದ ಎಕ್ಕಡ ಬೇಕು" ಎಂದಿತು.

"ನಿನಗೆ ಎಲ್ಲೋ ಬುದ್ಧಿ ಕೆಟ್ಟಿರಬೇಕು. ನಿನಗೇಕೆ ಚಿನ್ನದ ಎಕ್ಕಡ? ಹೋಗಾಚೆ" ಎಂದು ಲಾಳ ಕಟ್ಟುವವನು ಹೇಳಿದ.

ಅದಕ್ಕೆ ಸಗಣಿಹುಳು "ಚಿನ್ನದ ಎಕ್ಕಡ ನನಗಲ್ಲದೆ ಬೇರೆ ಯಾರಿಗೆ? ಈ ಮಹಾಪ್ರಾಣಿ ನನಗಿಂತ ಏನು ಹೆಚ್ಚು? ಇದಕ್ಕೆ ಮಾತ್ರ ಬೇಕು ಬೇಕಾದ ಊಟ, ಬೇಕುಬೇಕಾದ ಉಪಚಾರ. ನಾನೂ ಇದರ ಹಾಗೆಯೇ ಚಕ್ರವರ್ತಿಯ ಲಾಯಕ್ಕೆ ಸೇರಿದವನಲ್ಲವೇನು?" ಎಂದು ಕೇಳಿತು.

ಲಾಳ ಕಟ್ಟುವವನು ತಾಳ್ಮೆಯಿಂದ "ಅದೇನೋ ಸರಿಯೆ. ನೀನೂ ಲಾಯದವನೇ. ಆದರೆ ಈ ಕುದುರೆಗೆ ಚಿನ್ನದ ಎಕ್ಕಡ ಏಕೆ ಕೊಡು ತ್ತಿರುವರು, ಗೊತ್ತೆ?" ಎಂದ.

"ಓಹೋ! ನನಗೆ ಅಷ್ಟೂ ಗೊತ್ತಿಲ್ಲವೇನು! ಕೇವಲ ನನಗೆ ಅವಮಾನ ಮಾಡಬೇಕೆಂಬ ಉದ್ದೇಶದಿಂದ ಇದಕ್ಕೆ ನಾನಾ ರೀತಿಯ ಮರ್ಯಾದೆ ಮಾಡುತ್ತಿದ್ದಾರೆ. ಹೀಗೆಲ್ಲಾ ನನ್ನ ಮನಸ್ಸಿಗೆ ಸುಮ್ಮನೆ ಬೇಸರಪಡಿಸುವುದಾದರೆ, ನಾನು ಎಲ್ಲಾದರೂ ದೇಶಾಂತರ ಹೋಗಿಬಿಡು ತ್ತೇನೆ" ಎಂದು ಸಗಣಿಹುಳುವೆಂದಿತು.

"ಅಗತ್ಯವಾಗಿ ಈಗಲೇ ಈ ಕ್ಷಣವೇ ಹೊರಡು" ಎಂದ, ಲಾಳ ಕಟ್ಟುವವ.

"ಶುದ್ಧ ಒರಟ! ನಯವಿಲ್ಲ, ವಿನಯವಿಲ್ಲ" ಎಂದು ಸಗಣಿಹುಳು ಎದ್ದು ಆ ಲಾಯವನ್ನು ಬಿಟ್ಟು ಹೊರಕ್ಕೆ ಹಾರಿಹೋಯಿತು.

ಸ್ವಲ್ಪ ದೂರ ಹಾರಿದ ಮೇಲೆ ಆ ಹುಳು ಒಂದು ತೋಟಕ್ಕೆ ಬಂತು. ಗುಲಾಬಿ, ಜಾಜಿ, ಮಲ್ಲಿಗೆ ಮುಂತಾದ ಅನೇಕ ಹೂಗಳಿಂದ ಆ ತೋಟ ಪರಿಮಳವಾಗಿತ್ತು. ಅಲ್ಲಿ ಬಣ್ಣಬಣ್ಣದ ಹೆಣ್ಣುಹಕ್ಕಿಗಳು ಹೂವಿಂದ ಹೂವಿಗೆ ಗರಿಗೆದರಿ ಹಾರಾಡುತ್ತ, "ಎಷ್ಟು ಸುಂದರವಾಗಿದೆ! ಎಷ್ಟು

ಮನೋಹರವಾಗಿದೆ! ಎಷ್ಟು ರಮ್ಯವಾಗಿದೆ!" ಎಂದು ತೋಟದಲ್ಲಿ ಇರುವುದನ್ನೆಲ್ಲ ಮೆಚ್ಚಿಕೊಂಡು ಪ್ರಶಂಸೆಮಾಡುತ್ತಿದ್ದುವು.

"ಅಯ್ಯೋ, ನೀವು ಕಂಡಿರುವುದು ಇಷ್ಟೇ! ನಾನು ಇದರ ತಲೆಯ ಮೇಲೆ ಹೊಡೆದ ಹಾಗೆ ಇರತಕ್ಕಂಥದನ್ನು ಎಷ್ಟೋ ಕಂಡಿದ್ದೇನೆ. ಒಂದು ತಿಪ್ಪೆ ಕೂಡ ಇಲ್ಲದ ಈ ತೋಟವನ್ನು ಸುಂದರವೆಂದು ಕೊಂಡಾಡುವ ನಿಮ್ಮ ಬುದ್ಧಿಗೆ ಏನು ಕೊಟ್ಟರೂ ಸಾಲದು" ಎಂದು ಸಗಣಿಹುಳು ಅಲ್ಲಿಂದ ಎದ್ದು ಹಾರಿತು.

ಪಕ್ಕದ ಒಂದು ಮರದ ನೆರಳಿನಲ್ಲಿ ಒಂದು ಹುಲ್ಲುಮೆದೆ. ಅಲ್ಲಿ ಒಂದು ರೇಶಿಮೆಹುಳು "ಬಿಸಿಲು ಎಷ್ಟು ತಂಪಾಗಿದೆ! ಎಷ್ಟು ಹಿತ ವಾಗಿದೆ! ನಾನು ಇನ್ನು ಸ್ವಲ್ಪ ದಿವಸ ನಿದ್ರೆ ಮಾಡಿ ಎದ್ದರೆ, ಸುಂದರವಾದ ಚಿಟ್ಟೆಯಾಗಿ ಎದ್ದು, ಬಣ್ಣದ ರೆಕ್ಕೆಗಳನ್ನು ಹರಡಿಕೊಂಡು ಹಾರುತ್ತೇನೆ" ಎಂದು ಹರಿದುಕೊಂಡು ಹೋಯಿತು.

ಸಗಣಿಹುಳು ಅದರ ಮಾತು ಕೇಳಿ, "ಅಬ್ಬಬ್ಬಾ! ಏನು ಅಹಂಕಾರ! ಚಿಟ್ಟೆಯಾಗಿ, ಆದ ಮೇಲೆ ಹಾರುತ್ತೀಯಾ? ಅದೇನು ಮಹಾ! ನಾನು ಚಕ್ರವರ್ತಿಯ ಕುದುರೆ ಲಾಯದಿಂದ ಬಂದವನು. ಅಲ್ಲೊಂದು ಕುದುರೆ ಇದೆ. ನಾನು ಬಳಸಿ ಬಿಸುಟ ಹಳೆಯ ಚಿನ್ನದ ಎಕ್ಕಡಗಳನ್ನು ಅದು ಹಾಕಿಕೊಳ್ಳುತ್ತದೆ. ಅಂಥ ಕುದುರೆ ಕೂಡ ಹಾರಲಾರದು. ಆದರೆ ನಾನೋ, ನೋಡು, ಈಗಾಗಲೇ ಹೇಗೆ ಹಾರುತ್ತೇನೆ!" ಎಂದು ರೆಕ್ಕೆಯನ್ನು ಕೆದರಿ ಕೊಂಡು ಹಾರಿಹೋಯಿತು.

"ನಾನೂ ಎಷ್ಟೋ ಸಹನೆ ತಂದುಕೊಳ್ಳಬೇಕೆಂದು ಯತ್ನಿಸುತ್ತೇನೆ. ಆದರೆ ಇಂತಹವನ್ನು ಸಹಿಸುವುದು ಸ್ವಲ್ಪವೂ ಸಾಧ್ಯವಿಲ್ಲ" ಎಂದು ಕೊಳ್ಳುತ್ತಾ ಆ ಸಗಣಿಹುಳು ಒಂದು ಹುಲ್ಲುಗಾವಲಿಗೆ ಬಂತು. ಅಲ್ಲಿ ಹಾಗೇ ಕುಳಿತು ತೂಕಡಿಸುತ್ತಾ ಹಾಗೇ ನಿದ್ರೆಹೋಯಿತು. ಅದು ನಿದ್ರೆ ಮಾಡುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ದೊಡ್ಡ ಮಳೆ ಬಂತು. ಮಳೆಯ ಶಬ್ದವನ್ನು ಕೇಳಿ ಸಗಣಿಹುಳುವಿಗೆ ನಿದ್ರಾಭಂಗವಾಯಿತು. ಎದ್ದು, ಎಲ್ಲಿ ಯಾದರೂ ಮರೆಗೆ ಹೋಗೋಣವೆಂದರೆ, ಎಲ್ಲಿಗೂ ಹೋಗುವ ಹಾಗಿರಲಿಲ್ಲ. ಮಳೆ ಪಟಪಟ ಎಂದು ಬೆನ್ನಿನ ಮೇಲೆ ಬಡಿಯಿತು. ಮುಂದೆ ನಡೆಯೋಣ

ವೆಂದರೆ ನೀರು ಕೊಚ್ಚಿಕೊಂಡು ಹೋಗುತ್ತಿತ್ತು. ಹಾರೋಣವೆಂದರೆ, ರೆಕ್ಕೆಯೆಲ್ಲಾ ನೆನೆದು ಅಂಟಿಕೊಂಡುಹೋಗಿತ್ತು. "ನೆನೆದರೂ ಚಿಂತೆಯಿಲ್ಲ, ಸದ್ಯಃ ಜೀವವುಳಿದರೆ ಸಾಕು" ಎಂದು ಆ ಹುಳು ಇದ್ದಲ್ಲೇ ನೆನೆಯುತ್ತ ಮಲಗಿತು.

ಸ್ವಲ್ಪ ಹೊತ್ತಾದ ಮೇಲೆ ಮಳೆ ಸ್ವಲ್ಪ ಕಡಿಮೆಯಾಯಿತು. ಸಗಣಿ ಹುಳು ಕಣ್ಣುಗಳಿಂದ ನೀರನ್ನು ಒರೆಸಿಕೊಂಡು, ಸುತ್ತಲೂ ನೋಡಿತು. ದೂರದಲ್ಲಿ ಏನೋ ಬೆಳ್ಳಗೆ ಬೆಳಗುತ್ತಿತ್ತು. ಸಗಣಿಹುಳು ಅದರ ಕಡೆಗೆ ತೆವಳಿಕೊಂಡು ಹೋಯಿತು. ಅಲ್ಲಿ, ಮಧ್ಯಾಹ್ನ ಒಣಗುವುದಕ್ಕೆಂದು ಹರವಿದ ಒಗೆದ ಬಟ್ಟೆ ಮಳೆಯಲ್ಲಿ ನೆನೆದು ಬಿದ್ದಿತ್ತು. ಸಗಣಿಹುಳು ಆ ಬಟ್ಟೆಯ ಒಂದು ಪದರದಲ್ಲಿ ಬಂದು ಸೇರಿಕೊಂಡಿತು. ಅಲ್ಲಿ ಬೆಚ್ಚಗಿರಲಿಲ್ಲ, ನಿಜ. ಆದರೆ, ಬೇರೆ ಎಲ್ಲಿಯೂ ಮರೆ ಕಾಣಲಿಲ್ಲ. ಜೊತೆಗೆ ಮಳೆ ಇನ್ನೂ ಕುಟುಕುತ್ತಲೇ ಇತ್ತು. ಸಗಣಿಹುಳು ಸಿಡುಕಾಡುತ್ತ ಅಲ್ಲೇ ನಡುಗುತ್ತ ಇತ್ತು. ಆದರೆ ಅದರ ಸಿಡುಕನ್ನು ಕೇಳುವವರಾರು?

ಆ ಹರವಿದ ಬಟ್ಟೆಯ ಮೇಲೆ ಎರಡು ಕಪ್ಪೆಗಳು ಕುಳಿತಿದ್ದವು. ಅವುಗಳ ಕಣ್ಣು ಸಂತೃಪ್ತಿಯಿಂದ ಪಳಪಳ ಹೊಳೆಯುತ್ತಿತ್ತು.

ಅವುಗಳಲ್ಲಿ ಒಂದು "ಈ ದಿನವೇ ಸುದಿನ. ಏನು ಚಳಿ! ಏನು ಗಾಳಿ! ಏನು ಮಳೆ! ಈ ನೆನೆದ ಬಟ್ಟೆಯ ಮೇಲೆ ಕುಳಿತರೆ, ಈಜುವುದಕ್ಕೆ ಇಳಿದ ಹಾಗೆ ಮೈಯೆಲ್ಲ ಜುಮ್ಮೆನ್ನುತ್ತದೆ!" ಎಂದಿತು.

ಇನ್ನೊಂದು "ಕೆಲವು ಹಕ್ಕಿಗಳು ಇಲ್ಲಿ ಬೇಸಗೆ ಬಂದ ಕೂಡಲೆ ಚಳಿಯನ್ನು ಹುಡುಕಿಕೊಂಡು ಉತ್ತರದೇಶಗಳಿಗೆ ಹಾರಿ ಹೋಗುತ್ತವೆ. ಆದರೆ ಉತ್ತರದೇಶದಲ್ಲಿ ಎಲ್ಲಿಯಾದರೂ ಅವು ಇಂತಹ ಚಳಿಮಳೆಗಾಳಿ ಗಳನ್ನು ಕಂಡಿರುವುವೋ ಇಲ್ಲವೋ ಎಂದು ನನಗೆ ಸಂದೇಹ. ಇಲ್ಲಿ ಕುಳಿತಿದ್ದರೆ ಕೊಚ್ಚೆ ತುಂಬಿ ನಾರುತ್ತಿರುವ ಬಚ್ಚಲಿನಲ್ಲಿರುವಷ್ಟು ರಮ್ಯ ವಾಗಿದೆ. ನಮ್ಮ ದೇಶದ ಮುಂದೆ ಬೇರೆ ಯಾವ ದೇಶವುಂಟು!" ಎಂದು ಹೆಮ್ಮೆಯಿಂದ ಹೇಳಿತು.

ಅದಕ್ಕೆ ಸಗಣಿಹುಳು "ಚಕ್ರವರ್ತಿಯ ಲಾಯವನ್ನು ಹುಟ್ಟಿದಾರಭ್ಯ ಕಾಣದ ನೀವು ಹೀಗೆ ಕೊಚ್ಚಿಕೊಳ್ಳುವುದು ತೀರ ಸ್ವಾಭಾವಿಕ. ನೀವು

ಒಮ್ಮೆ ಅಲ್ಲಿಗೆ ಬಂದು ನೋಡಬೇಕು. ಆ ತಿಪ್ಪೆಯೇನು! ಅಲ್ಲಿಯ ಸುಖೋಷ್ಣವಾದ ತೇವವೇನು! ಅದನ್ನು ನೀವು ನೋಡಬೇಕು. ಏನು ಮಾಡುವುದು? ಸಂಚಾರ ಹೋದ ಕಡೆಗೆಲ್ಲ ನಮ್ಮ ತಿಪ್ಪೆಗಳನ್ನು ಹೊತ್ತು ಕೊಂಡು ಬರುವುದಕ್ಕಾಗುತ್ತದೆಯೇನು? ಅಂಥ ತಿಪ್ಪೆ ಇಲ್ಲೇ ಹತ್ತಿರದಲ್ಲಿ ಎಲ್ಲಿಯಾದರೂ ಇದ್ದರೆ, ಹೇಳಿ, ನೋಡೋಣ" ಎಂದಿತು.

ಅದು ಹೇಳಿದ ಮಾತು ಕಪ್ಪೆಗಳಿಗೆ ಕೇಳಿಸಲಿಲ್ಲವೋ, ಅಥವಾ ಕೇಳಿಸಿದರೂ ಅರ್ಥವಾಗಲಿಲ್ಲವೋ, ಅವು ಉತ್ತರ ಕೊಡದೆ ಸುಮ್ಮನಿದ್ದವು.

ಸಗಣಿಯಹುಳು "ಇಲ್ಲಿ ಎಲ್ಲಾದರೂ ತಿಪ್ಪೆ ಇದೆಯೆ?" ಎಂದು ಮೂರು ಸಲ ಪ್ರಶ್ನಿಸಿತು. ಆದರೆ ಯಾರೂ ಉತ್ತರ ಹೇಳಲಿಲ್ಲ. ಆಗ ಅದು "ಏನಿದು, ತೀರ ಅಸಹ್ಯ! ಕೇಳಿದ ಪ್ರಶ್ನೆಗೆ ಉತ್ತರ ಹೇಳುವವರೇ ಇಲ್ಲ. ನಾನಾದರೂ ಅಷ್ಟೆ. ಒಂದು ಸಲ ಕೇಳಿದುದಕ್ಕೆ ಉತ್ತರ ಬರದೆ ಹೋದರೆ, ಎರಡನೆಯ ಸಲ ಪುನಃ ನಾನು ಬೇರೆ ಅವರನ್ನು ಮಾತನಾಡಿ ಸುವುದಿಲ್ಲ" ಎಂದು ಅಲ್ಲಿಂದ ಹೊರಟಿತು. ಅದು ಹೋಗುವ ದಾರಿಯಲ್ಲಿ ಒಂದು ಮಡಕೆಯ ಚೂರು ಬಿದ್ದಿತ್ತು. "ಇಲ್ಲೇಕೆ ಬಂತು ಈ ಮಡಕೆಯ ಚೂರು?" ಎಂದುಕೊಂಡು ಆ ಸಗಣಿಯ ಹುಳು ಅದರ ಮರೆಗೆ ಬಂದಿತು. ಅಲ್ಲಿ ಆ ಮಡಕೆಯ ಚೂರಿನ ಮರೆಯಲ್ಲಿ ಹತ್ತಾರು ಕಂಬಳಿ ಹುಳುಗಳು ಸಂಸಾರ ಮಾಡಿಕೊಂಡಿದ್ದುವು. ಹತ್ತಾರು ಸಂಸಾರಗಳಿದ್ದರೂ ಅವು ಪರಸ್ಪರವಾಗಿ ತುಂಬ ಅನ್ಯೋನ್ಯವಾಗಿದ್ದುವು.

"ನಮ್ಮ ಹುಡುಗನಿಗೆ ಮದುವೆ ನಿಷ್ಕರ್ಷೆಯಾಗಿದೆ. ಮದುವೆಗೆ ನೀನೂ ಬರಬೇಕು" ಎಂದು ಒಂದು ತಾಯಿಕಂಬಳಿಹುಳು ಸಗಣಿಹುಳು ವಿಗೆ ಹೇಳಿತು.

ಇನ್ನೊಂದು "ನನ್ನ ಮಗು ಹುಟ್ಟಿದ ದಿವಸದಿಂದಲೇ ಸ್ವತಂತ್ರವಾಗಿ ತಿರುಗಾಡುವುದನ್ನು ಕಲಿತಿತು. ಹೀಗೆ ತಾಯಿತಂದೆಗೆ ತೊಂದರೆಯಾಗದ ಹಾಗೆ ತನ್ನ ಗತಿಯನ್ನು ತಾನು ನೋಡಿಕೊಳ್ಳುವ ಇನ್ನೊಂದು ಕಂಬಳಿ ಹುಳು ಪ್ರಪಂಚದಲ್ಲೇ ಇಲ್ಲವೆಂದು ನನ್ನ ದೃಢವಾದ ನಂಬಿಕೆ" ಎಂದಿತು.

ಹೀಗೇ ಒಂದೊಂದು ತಾಯಿಯೂ ತನ್ನ ತನ್ನ ಮಗುವಿನ ಪ್ರತಾಪ ವನ್ನು ಹೇಳಿಕೊಳ್ಳುತ್ತಿರುವಾಗ ಒಂದೊಂದು ಮರಿ ಕಂಬಳಿಹುಳುವೂ

ಬಂದು ಸಗಣಿಹುಳುವಿನ ಮೈ ಮುಖ ಕಾಲುಗಳ ಮೇಲೆಲ್ಲ ಹತ್ತಿ ಕುಳಿತುಕೊಂಡವು.

ತಾಯಿ ಕಂಬಳಿಹುಳುಗಳು ತಮ್ಮ ಮಕ್ಕಳ ತುಂಟತನವನ್ನು ಕಂಡು ತಾಯಿತನದ ಹೆಮ್ಮೆಯಿಂದ ಉಬ್ಬಿಹೋಗಿ, "ಮಕ್ಕಳು ಎಂದರೆ ಹೀಗೆ ಇರಬೇಕು. ಪಾದರಸದ ಹಾಗಿರಬೇಕು!" ಎಂದು ಮೆಚ್ಚಿಕೊಂಡವು. ಆದರೆ ಸಗಣಿಹುಳುವಿಗೆ "ಇದೇನು ಅನಿಷ್ಟ!" ಎನ್ನಿಸಿತು. ಆದರೂ ಹಾಗೆಂದು ಅದು ಬಾಯಿಬಿಟ್ಟು ಹೇಳಲಿಲ್ಲ. ಎಷ್ಟಾದರೂ ಅರಸನ ಲಾಯದಲ್ಲಿ ಹುಟ್ಟಿ ಬೆಳೆದ ಹುಳುವಲ್ಲವೆ?

"ಇಲ್ಲಿಗೆ ಬಹಳ ಹತ್ತಿರವಾದ ತಿಪ್ಪೆಯ ಗುಂಡಿ ಎಲ್ಲಿದೆ?" ಎಂದು ಸಗಣಿಹುಳು ಕೇಳಿತು.

"ಅತಿ ಹತ್ತಿರವಾದದ್ದೆಂದರೆ, ಅದೋ, ಪ್ರಪಂಚದ ಆಚೆಯ ತುದಿಯಲ್ಲಿ ಒಂದಿದೆ" ಎಂದು ಆ ಕಂಬಳಿಹುಳುಗಳು ಹೇಳಿದುವು. ಆ ಹುಳುಗಳಿಗೆ ಪಕ್ಕದ ಬಚ್ಚಲಿನ ಆಚೆಯ ದಡವೇ ಪ್ರಪಂಚದ ಆಚೆಯ ತುದಿಯಾಗಿತ್ತು. ಬಚ್ಚಲಿನ ಆಚೆಯ ಕಡೆ ಒಂದು ತಿಪ್ಪೆಯೇನೋ ಇತ್ತು. "ಇದೇನು ಹುಚ್ಚೋ ಕಾಣೆ. ಒಂದು ತಿಪ್ಪೆಗೋಸ್ಕರ ಅಷ್ಟು ದೂರ ಹೋಗಿ ಏನಾಗಬೇಕು? ನಮ್ಮ ಮಕ್ಕಳಿಗೆ ಯಾರಿಗೂ ಇಂಥ ಹುಚ್ಚು ಬೇಡ" ಎಂದು ಅವು ತಮಗೆ ತಾವೇ ಎಂದುಕೊಂಡವು.

"ಆಗಲಿ, ನೋಡೋಣ. ಪ್ರಪಂಚದ ತುದಿಯಾದರೂ ಸರಿಯೆ, ತಿಪ್ಪೆ ಸಿಕ್ಕಿದರೆ ಸಾಕು" ಎಂದುಕೊಂಡು ಆ ಸಗಣಿಹುಳು ಕಂಬಳಿಹುಳುಗಳಿಗೆ 'ಹೋಗಿಬರುತ್ತೇನೆ' ಎಂದು ಉಪಚಾರಕ್ಕಾಗಿಯಾದರೂ ಹೇಳದೆ, ಅಲ್ಲಿಂದ ಎದ್ದು ಹೊರಟಿತು.

ಬಚ್ಚಲಿನ ಆಚೆಯ ದಡದ ತಿಪ್ಪೆಯ ಹತ್ತಿರಕ್ಕೆ ಅದು ಬಂದಾಗ, ಅಲ್ಲಿದ್ದ ಅನೇಕ ಸಗಣಿಹುಳುಗಳು ಅದಕ್ಕೆ ಸ್ವಾಗತವನ್ನು ಬಯಸಿದುವು. "ಬರಬೇಕು, ಬರಬೇಕು. ಈ ಸುಖೋಷ್ಣವಾದ ತೇವದ ಮಣ್ಣಿನಲ್ಲಿ ಹೊರಳಬೇಕು. ಬಾ, ಬಾ, ತುಂಬ ದೂರ ಬಂದು, ನಿನಗೂ ಆಯಾಸವಾಗಿರಬೇಕು" ಎಂದು ಕರೆದುವು.

"ಓಹೋ, ಅಗತ್ಯವಾಗಿ ಬರುತ್ತೇನೆ. ಮಳೆಯಲ್ಲಿ ನೆನೆದು, ಗಾಳಿಯಲ್ಲಿ ಬಳಲಿ, ಒಗೆದ ಬಿಳಿಯ ಬಟ್ಟೆಯ ಮೇಲೆ ಬಿದ್ದು ಪಾಡು ಪಟ್ಟಿದ್ದೇನೆ. ನನ್ನ ಅದೃಷ್ಟಕ್ಕೆ ಒಂದು ಕೊಳಕು ಬಟ್ಟೆಯ ಚೂರಾದರೂ ನನಗೆ ಸಿಕ್ಕಬೇಡವೆ! ಒಂದು ಮಡಕೆಯ ಚೂರಿನ ಮರೆಯಲ್ಲಿ ನಿಂತೂ ನಿಂತೂ ರೆಕ್ಕೆಯೆಲ್ಲ ನೋವುಬಂದಿದೆ. ಅಂತೂ, ಇದುವರೆಗೆ ನಾನು ಏನು ಪಾಡು ಪಟ್ಟಿದ್ದರೂ, ಕಡೆಗೆ ಈಗ ನನ್ನವರ ಜೊತೆಗೇ ಸೇರಿದೆನಲ್ಲ" ಎಂದು ಸಗಣಿಹುಳು ಬಂದು ಅವುಗಳ ಜೊತೆಗೆ ಸೇರಿಕೊಂಡಿತು.

ಒಂದು ಮುದಿ ಸಗಣಿಹುಳು "ನೀನು ಯಾವ ತಿಪ್ಪೆಯಿಂದ ಬಂದೆ?" ಎಂದು ಕೇಳಿತು.

"ನಾನು ತಿಪ್ಪೆಗಿಂತ ಸೊಗಸಾದ ಸ್ಥಳದಿಂದ ಬಂದವನು. ಅರಸನ ಲಾಯದಲ್ಲಿ ನಾನು ಹುಟ್ಟಿದವನು. ಅಲ್ಲಿ ನನಗೆ ಚಿನ್ನದ ಎಕ್ಕಡಗಳನ್ನು ಮಾಡಿಸಿಕೊಟ್ಟಿದ್ದರು. ನಾನು ಈಗ ಆ ರಾಜನ ಒಂದಾನೊಂದು ರಹಸ್ಯ ಕಾರ್ಯಕ್ಕಾಗಿ ಸಂಚಾರಮಾಡುತ್ತಿದ್ದೇನೆ. ದಯವಿಟ್ಟು ಅದನ್ನು ಕುರಿತು ಕೇಳಬೇಡಿ. ರಾಜರಹಸ್ಯವನ್ನು ರಟ್ಟುಮಾಡಿದರೆ ಮಹಾಪ್ರಮಾದ ವಾದೀತು" ಎಂದು ಸಗಣಿಹುಳುವೆಂದಿತು.

ಪಕ್ಕದಲ್ಲಿದ್ದ ಮೂರು ಇನ್ನೂ ಮದುವೆಯಾಗದ ಹೆಣ್ಣು ಸಗಣಿ ಹುಳುಗಳು ಅದರ ವರ್ಣನೆಯನ್ನು ಕೇಳಿ, ಏನು ಹೇಳುವುದಕ್ಕೂ ತೋಚದೆ, ಕಿಲಕಿಲ ನಕ್ಕವು.

"ಇವರು ಮೂವರಿಗೂ ಇನ್ನೂ ಮದುವೆಯಾಗಿಲ್ಲ" ಎಂದು ಅವುಗಳ ತಾಯಿ ಹೇಳಿದಾಗ, ಅವು ನಾಚಿಕೆಯಿಂದ ನೆಲವನ್ನು ಕೆರೆಯುತ್ತ ಪುನಃ ಕಿಲಕಿಲ ನಕ್ಕವು.

ವಿಶ್ರಮಿಸಿಕೊಳ್ಳುತ್ತಿದ್ದ ಸಗಣಿಹುಳು "ಇಂತಹ ಸುಂದರಿಯರನ್ನು ನಮ್ಮ ರಾಜನ ಲಾಯದಲ್ಲಿ ಕೂಡ ನಾನು ಕಂಡಿಲ್ಲ" ಎಂದಿತು.

"ಛೆಛೆ, ಹಾಗೆಲ್ಲ ಹೇಳಿದರೆ, ಮೊದಲೇ ತಲೆ ನಿಲ್ಲದ ಹುಡುಗಿಯರಿಗೆ ಮತ್ತೂ ತಲೆ ತಿರುಗಿಹೋದೀತು! ಆದರೆ ಇವರಲ್ಲಿ ಯಾರನ್ನಾದರೂ ಮದುವೆಯಾಗುವ ಮನಸ್ಸು ನಿನಗೆ ಇದ್ದರೆ, ಹಾಗೆ ಏನು ಬೇಕಾದರೂ ಮಾತನಾಡಬಹುದು" ಎಂದು ಅವುಗಳ ತಾಯಿ ಹೇಳಿತು.

ಸಗಣಿಹುಳುವಿಗೆ ಮದುವೆ ಮಾಡಿಕೊಳ್ಳುವ ಆಸೆಯೇನೋ ನಿಜವಾಗಿಯೂ ಇತ್ತು. ಸ್ವಲ್ಪ ಹೊತ್ತಿನೊಳಗೇ ಮದುವೆಯ ಮಾತುಕತೆ ನಡೆದು, ನಿಷ್ಕರ್ಷೆಯೂ ಆಯಿತು. ತಾಯಿಸಗಣಿಹುಳು ವಧೂವರರನ್ನು ಆಶೀರ್ವದಿಸಿತು, ಉಳಿದ ಸಗಣಿಹುಳುಗಳು ಸಂತೋಷದಿಂದ ಅವುಗಳ ಮೇಲೆ ಕೆಸರನ್ನು ಎರಚಿದುವು.

ಮದುವೆಯಾದ ದಿನ ಸಗಣಿಹುಳು ಸುಖವಾಗಿ ಸಂತೋಷದಿಂದಿತ್ತು. ಮಾರನೆಯ ದಿನವೂ ಸಂತೋಷವಾಗಿಯೇ ಇತ್ತು. ಮೂರನೆಯ ದಿನ ಸ್ವಲ್ಪ ಬೇಸರ ಕಾಣಿಸಿಕೊಂಡಿತು. ನಾಲ್ಕನೆಯ ದಿನ ಹೆಂಡತಿಗೆ ಆಹಾರ ಹುಡುಕಿ ತರಬೇಕಾಯಿತು, 'ನಾಳೆಯಿಂದ ಮಕ್ಕಳಿಗೂ ಆಹಾರ ಒದಗಿಸಬೇಕಲ್ಲಾ' ಎಂಬ ಹೆದರಿಕೆ ಹುಟ್ಟಿತು.

"ಎಲ್ಲೆಲ್ಲಿಯೋ ಬಂದು ಸಿಕ್ಕಿಕೊಂಡೆನಲ್ಲ. ಇದಕ್ಕೆ ಏನು ಮಾಡುವುದು? ಮಾಡುವುದು ಮತ್ತೇನು? ನನಗೆ ಇವು ಮೋಸ ಮಾಡಿದ ಹಾಗೆಯೇ ನಾನೂ ಇವುಗಳಿಗೆ ಮೋಸಮಾಡಿದರಾಯಿತು" ಎಂದು ಆ ಸಗಣಿಹುಳು, ಮನಸ್ಸಿನಲ್ಲಿ ಯೋಚನೆ ಬಂದಿತೋ ಇಲ್ಲವೋ, ಹೇಳದೆ ಕೇಳದೆ ಹೆಂಡತಿಯನ್ನು ಬಿಟ್ಟು, ತಿಪ್ಪೆಯಿಂದ ಹೊರಟಿತು. ಆ ದಿನ ಆಯಿತು, ಮಾರನೆಯ ದಿನವಾಯಿತು, ಮೂರನೆಯ ದಿನವಾಯಿತು; ಹೊರಟ ಸಗಣಿಹುಳು ಮತ್ತೆ ಹಿಂದಿರುಗಲೇ ಇಲ್ಲ. ಅದು ಬದುಕಿದ್ದರೂ ಅದರ ಕೈಹಿಡಿದ ಹುಳು ವಿಧವೆಯಾಯಿತು.

ತಾಯಿ ಸಗಣಿಹುಳು "ಎಂಥ ದರಿದ್ರ ಗಂಡುಹುಳು! ಅದು ಹಾಳಾಗಿ ಹೋಗ! ಹೀಗೆ ಕೈಹಿಡಿದವರನ್ನು ನಡುತಿಪ್ಪೆಯಲ್ಲಿ ಕೈಬಿಡಬಹುದೆ? ಆದರೇನು? ಆದದ್ದು ಆಗಿಹೋಯಿತು. ನನ್ನ ಮಗುವಿಗೆ ತಿರುಗಿ ಮದುವೆ ಮಾಡಿದರಾಯಿತು" ಎಂದು ಇದ್ದುದರಲ್ಲಿಯೇ ಸಮಾಧಾನ ಪಟ್ಟುಕೊಂಡಿತು.

ಈ ನಡುವೆ ನಮ್ಮ ಸಗಣಿಹುಳು ಒಂದು ಕೋಸು ಎಲೆಯ ಮೇಲೆ ಏರಿಕೊಂಡು ಬಚ್ಚಲಿನ ನೀರಿನಲ್ಲಿ ತೇಲಿಕೊಂಡು ಹೋಗುತ್ತಿತ್ತು. ಹಾಗೆ ಅದು ಹೋಗುತ್ತಿದ್ದಾಗ ಇಬ್ಬರು ಹುಡುಗರು ಅದನ್ನು ಕಂಡರು; ಅದನ್ನು ಕೈಗೆತ್ತಿಕೊಂಡು ತಿರುಗಿಸಿ ತಿರುಗಿಸಿ ನೋಡಿದರು. ಒಬ್ಬ ಅದಕ್ಕೆ ಏನೋ

ಒಂದು ಪರದೇಶದ ಹೆಸರನ್ನಿಟ್ಟು, ಅದರ ವಿಷಯದ ಮೇಲೆ ಒಂದು ದೊಡ್ಡ ಉಪನ್ಯಾಸವನ್ನು ಕೊಟ್ಟ. ಅವನು ಹೇಳಿದ್ದರಲ್ಲಿ ಒಂದು ಮಾತಾದರೂ ಸಗಣಿಹುಳುವಿಗೆ ಅರ್ಥವಾಗಲಿಲ್ಲ. ಅವನು ತನ್ನನ್ನು ಏನೇನೋ ಬಯ್ದನೆಂದೇ ಅದು ತಿಳಿದುಕೊಂಡಿತು. ಎರಡನೆಯ ಹುಡುಗ "ಈ ಹುಳು ಒಳ್ಳೇ ಧಡೂತಿಯಾಗಿದೆ. ಇದನ್ನು ಮನೆಗೆ ತೆಗೆದುಕೊಂಡು ಹೋಗಿ, ನಮ್ಮ ಇತರ ಹುಳುಗಳ ಸಂಗ್ರಹಕ್ಕೆ ಇದನ್ನೂ ಸೇರಿಸಿಕೊಳ್ಳೋಣ" ಎಂದನು.

ಆ ವೇಳೆಗೆ ಸಗಣಿಹುಳುವಿನ ರೆಕ್ಕೆಗಳು ಸ್ವಲ್ಪ ಗಾಳಿ ಬಿಸಿಲು ಆಡಿ ಆರಿತ್ತು. ಹುಡುಗನ ಮಾತು ಕೇಳಿದೊಡನೆ ಅದು ರೆಕ್ಕೆ ಬಿಚ್ಚಿ, ಅವನ ಕೈಯಿಂದ ಹಾರಿತು. ತುಂಬ ದೂರ ಹೋದ ಮೇಲೆ ಒಂದು ಗಾಜಿನ ಮನೆ ಸಿಕ್ಕಿತು. ಅದರ ಮೇಲುಚಾವಣಿಯ ಒಂದು ಗಾಜಿನ ಹೆಂಚು ಸಡಿಲವಾಗಿತ್ತು. ಸಗಣಿಯಹುಳು ಅದರ ಮೂಲಕ ಒಳಗೆ ಬಂತು. ಅಲ್ಲಿ ಅನೇಕ ಗಿಡಗಳನ್ನು ಕುಂಡಗಳಲ್ಲಿ ಇಟ್ಟು ತುಂಬಾ ಗೊಬ್ಬರ ಹಾಕಿದ್ದರು. ಹುಳು ತೃಪ್ತಿಯಿಂದ ಉಸಿರೆಳೆದು, ಆ ಹಿತವಾದ ಮಣ್ಣಿನಲ್ಲಿ ಹುದುಗಿಕೊಂಡಿತು.

ಸ್ವಲ್ಪ ಹೊತ್ತಿನಲ್ಲೇ ಅದಕ್ಕೆ ನಿದ್ರೆ ಬಂತು. ಆ ನಿದ್ರೆಯಲ್ಲಿ ಅದಕ್ಕೆ ಒಂದು ಕನಸು. ಅರಸನ ಕುದುರೆ ಸಾಯುತ್ತಿರುವ ಹಾಗೂ, ಸಾಯುವ ಕಾಲದಲ್ಲಿ ತನ್ನ ಚಿನ್ನದ ಎಕ್ಕಡಗಳನ್ನು ಅದು ತನಗೆ ಕೊಟ್ಟಹಾಗೂ, ಇನ್ನೂ ಎರಡು ಹೊಸ ಜೊತೆ ಮಾಡಿಸಿಕೊಡುತ್ತೇನೆ ಎಂದು ತನಗೆ ವಾಗ್ದಾನಮಾಡಿದ ಹಾಗೂ ಸಗಣಿಹುಳುವಿಗೆ ಕನಸಾಯಿತು. ಬೆಳಗಿನವರೆಗೂ ಇಂಥ ಕನಸುಗಳನ್ನೇ ಕಂಡು ಕಂಡು, ಅದು ತುಂಬ ಸುಖಪಟ್ಟಿತು.

ಬೆಳಕು ಹರಿದ ಮೇಲೆ ಆ ಹುಳು ಎದ್ದು ಕಣ್ಣು ಬಿಟ್ಟು ಸುತ್ತಲೂ ನೋಡಿತು. ಅಬ್ಬಬ್ಬಾ! ಎಂತೆಂತಹ ಗಿಡಗಳು, ಎಂತೆಂತಹ ಬಣ್ಣಬಣ್ಣದ ಎಲೆಗಳು, ಎಂತೆಂತಹ ಬಣ್ಣಬಣ್ಣದ ಹೂವುಗಳು! ಚಿನ್ನದಂಥ ಹಳದಿ, ಸೂರ್ಯನಂಥ ಬೆಳ್ಳಿ, ಬೆಂಕಿಯಂಥ ಕೆಂಪು, ಹಿಮದಂಥ ಬಿಳುಪು! ಅಬ್ಬಬ್ಬಬ್ಬಾ!

"ಆಹಾಹಾಹಾ! ಎಷ್ಟು ಎಲೆ! ಎಷ್ಟು ಹೂವು! ಇವುಗಳೆಲ್ಲ ಚೆನ್ನಾಗಿ ಕೊಳೆತುಹೋದರೆ ಎಷ್ಟು ಸೊಗಸಾಗಿರುತ್ತದೆಯೊ! ಇದು ದೊಡ್ಡ ಉಗ್ರಾಣವಿದ್ದ ಹಾಗಿದೆ. ಇಂತಹ ಕಡೆ ನನ್ನ ಜಾತಿಯವರು ಯಾರಾದರೂ ಇದ್ದೇ ಇರಬೇಕು. ಯಾರಾದರೂ ಇದ್ದಾರೆಯೇ ನೋಡೋಣ. ಸರಿಯಾದ ಜೊತೆ ಸಿಕ್ಕಿದರೆ ನೋಡೋಣ" ಎಂದು ಆ ಸಗಣಿಹುಳು ಅಲ್ಲಿಂದಿಲ್ಲಿಗೆ ಹರಿದಾಡುತ್ತ, ತಾನು ಹಿಂದಿನ ರಾತ್ರಿ ಕಂಡ ಕನಸನ್ನೇ ಕುರಿತು ಮೆಲಕುಹಾಕುತ್ತ, "ನಿಜವಾಗಿ ಆ ಕುದುರೆ ಸತ್ತರೆ, ಅದರ ಚಿನ್ನದ ಎಕ್ಕಡ ನನಗೆ ದೊರೆತರೆ, ಎಷ್ಟು ಚೆನ್ನಾಗಿರುತ್ತದೆ!" ಎಂದುಕೊಂಡಿತು.

ಆಗ ಯಾರೋ ಅದನ್ನು ಕೈಯಲ್ಲಿ ಹಿಡಿದು, ಅದು ತಪ್ಪಿಸಿಕೊಳ್ಳಲಾಗದ ಹಾಗೆ ಹಿಸುಕಿದಂತೆ ಆಯಿತು. ಅಲ್ಲಿಯ ತೋಟಗಾರನ ಮಗನೂ ಅವನ ಸ್ನೇಹಿತನೂ ಆಟವಾಡುತ್ತಿರುವಾಗ ಆ ಹುಳುವನ್ನು ಕಂಡು, ತಮಾಷೆಗಾಗಿ ಅದನ್ನು ಎತ್ತಿಕೊಂಡಿದ್ದರು. ಮೊದಲು ಅದನ್ನು ಒಂದು ಎಲೆಯಲ್ಲಿ ಭದ್ರವಾಗಿ ಸುತ್ತಿ, ಅದನ್ನು ತನ್ನ ಷರಾಯಿಯ ಜೇಬಿನಲ್ಲಿ ಒಬ್ಬ ಹುಡುಗ ಹಾಕಿಕೊಂಡ. ಸಗಣಿಹುಳು ತನ್ನ ಸೆರೆಯಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಹಾಗೆ ಹೀಗೆ ತಿರುಗಾಡಿತು, ಒದ್ದಾಡಿತು. ಹುಡುಗ ಒಂದು ಸಲ ಜೇಬಿನ ಮೇಲೆ ಕೈಯಿಟ್ಟು, ಅದನ್ನು ಹಿಸುಕಿದ. ಅವನು ಏನು ಮಾಡಿಬಿಡುತ್ತಾನೋ ಎಂಬ ಹೆದರಿಕೆಯಿಂದ ಹುಳು ಕದಲದೆ ಸುಮ್ಮನಾಯಿತು.

ಹುಡುಗರಿಬ್ಬರೂ ಆ ತೋಟದ ಕೊನೆಯಲ್ಲಿದ್ದ ಒಂದು ಕೊಳಕ್ಕೆ ಹೋದರು. ಅಲ್ಲಿ ಬಿದ್ದಿದ್ದ ಒಂದು ಮರದ ಮುರುಕಲು ಬಟ್ಟಲನ್ನು ಎತ್ತಿಕೊಂಡು, ಅದರ ನಡುವೆ ಒಂದು ಕಡ್ಡಿಯನ್ನು ಸಿಕ್ಕಿಸಿ, ಆ ಕಡ್ಡಿಗೆ ಆ ಸಗಣಿಹುಳುವನ್ನು ನಾರಿನಿಂದ ಬಿಗಿದು, ಅದನ್ನು ಕೊಳದಲ್ಲಿ ತೇಲಲು ಬಿಟ್ಟರು.

"ಹೋಗು, ಹೋಗು, ಹುಳು. ಇದೇ ನಿನ್ನ ನಾವೆ, ನೀನೇ ಇದರ ನಾವಿಕ. ಹೋಗು, ಹೋಗು, ಹುಳು" ಎಂದರು.

ಕೊಳವೇನೂ ಅಷ್ಟು ದೊಡ್ಡದಾಗಿರಲಿಲ್ಲ. ಆದರೂ ಸಗಣಿಹುಳು ವಿನ ಪಾಲಿಗೆ ಅದು ಒಂದು ಸಮುದ್ರವೇ ಆಗಿತ್ತು. ಹುಳು ಹೆದರಿ ಕೊಂಡು, ಬಿಡಿಸಿಕೊಳ್ಳಲು ಒದ್ದಾಡಿತು. ಆ ಒದ್ದಾಟದಲ್ಲಿ ಅದನ್ನು ಬಿಗಿದಿದ್ದ ಕಡ್ಡಿ ಕಳಚಿಕೊಂಡು, ಹುಳು ಬೆನ್ನಡಿಯಾಗಿ ಬಿದ್ದಿತು.

ಹೀಗೆ ಆ ಪುಟ್ಟ ನಾವೆ ತನ್ನ ಪುಟ್ಟ ನಾವಿಕನನ್ನು ಹೊತ್ತು ಕೊಂಡು ಕೊಳದ ಅಲೆಗಳು ತುಯ್ದ ಕಡೆಗೆ ತೇಲಿಯಾಡುತ್ತಿತ್ತು. ಅಲೆಗಳು ಅದನ್ನು ದಡದ ಕಡೆಗೆ ತಳ್ಳಿದಾಗಲೆಲ್ಲ, ಆ ಹುಡುಗರು ಷರಾಯಿಯನ್ನು ಮೇಲಕ್ಕೆ ಮುದುರಿಕೊಂಡು ಕೊಳದೊಳಕ್ಕೆ ಹೋಗಿ, ಅದನ್ನು ಒಳಕ್ಕೆ ತಳ್ಳುತ್ತಿದ್ದರು.

ಅಷ್ಟರಲ್ಲೇ ತೋಟಗಾರ ಗದರಿಸಿಕೊಂಡ ಧ್ವನಿಯನ್ನು ಕೇಳಿ, ಆ ಹುಡುಗರು ಹುಳುವನ್ನು ಅಲ್ಲೇ ಬಿಟ್ಟು ಓಡಿಹೋದರು. ಅಲೆಗಳು ಆ ಹುಳುವಿದ್ದ ನಾವೆಯನ್ನು ಹಿಡಿದು, ಆಚೆಗೂ ಈಚೆಗೂ ಉಯ್ಯಾಲೆಯಾಡಿ, ಕೊನೆಗೆ ಅದನ್ನು ಕೊಳದ ಮಧ್ಯಕ್ಕೆ ತಂದುಬಿಟ್ಟಿತು. ಸಗಣಿಹುಳು ಯಾವ ಕಡೆ ನೋಡಿದರೂ ನೀರು, ನೀರು, ನೀರು! ಅನಂತವಾದ ನೀರು!

ಆಗ ಒಂದು ನೊಣ ಅಲ್ಲಿಗೆ ಹಾರಿಬಂದು, "ಗಾಳಿ, ಬೆಳಕು ಇಲ್ಲಿ ಎಷ್ಟು ಸೊಗಸಾಗಿದೆ! ನಾನೂ ಒಂದು ಕ್ಷಣ ಇಲ್ಲಿ ಕುಳಿತು, ಸ್ವಲ್ಪ ಬಿಸಿಲು ಕಾಯಿಸಿಕೊಳ್ಳುತ್ತೇನೆ" ಎಂದು ಆ ಸಗಣಿಹುಳುವಿನ ಪಕ್ಕದಲ್ಲಿ ಕುಳಿತು, "ಇಂಥ ನಾವೆಯಲ್ಲಿ ಪ್ರಯಾಣಮಾಡುವ ನಿನ್ನ ಅದೃಷ್ಟವೇ ಅದೃಷ್ಟ!" ಎಂದಿತು.

"ನಿಜವಾದ ಸ್ಥಿತಿಯೇನು ಎಂಬುದನ್ನು ತಿಳಿಯದೆ ಸುಮ್ಮನೆ ಮಾತನಾಡಿದರಾಯಿತೆ! ನನ್ನನ್ನು ಇಲ್ಲಿ ಕಟ್ಟಿಹಾಕಿದ್ದಾರೆ ಎಂಬುದು ಕಣ್ಣಿಗೆ ಕಾಣುವುದಿಲ್ಲವೆ!" ಎಂದು ಸಗಣಿಹುಳು ಸಿಡುಕಿತು.

"ಆದರೆ ನನ್ನನ್ನು ಕಟ್ಟಿಹಾಕಿಲ್ಲ ಎಂಬುದು ನಿನ್ನ ಕಣ್ಣಿಗೆ ಕಾಣಿ ಸುವುದಿಲ್ಲವೆ?" ಎಂದು ಹೇಳುತ್ತಾ ನೊಣ ಅಲ್ಲಿಂದ ಎದ್ದು ಹಾರಿ ಹೋಯಿತು.

ಆಗ ಸಗಣಿಹುಳು "ಇದೇ! ಪ್ರಪಂಚದ ಯೋಗ್ಯತೆ ಎಂದರೆ ಇಷ್ಟೇ! ಎಲ್ಲಾ ಸ್ವಾರ್ಥ ಎಂದರೆ ಸ್ವಾರ್ಥ! ತಾನುಂಟೋ ಮೂರು ಲೋಕವುಂಟೋ ಎಂದು! ಸ್ವಾರ್ಥದ ಯೋಚನೆಯಿಲ್ಲದವನು ನಾನು ಒಬ್ಬನೇ ಎಂದು ಕಾಣುತ್ತದೆ! ಮೊದಲು, ನನಗೆ ಚಿನ್ನದ ಎಕ್ಕಡ ಕೊಡುವುದಿಲ್ಲವೆಂದು ಲಾಯದಿಂದ ಅಟ್ಟಿಬಿಟ್ಟರು; ಅನಂತರ ಮಳೆಯಲ್ಲಿ ತೊಯ್ದು, ನೆನೆದು, ನೆಗಡಿ ಸಂಪಾದಿಸಿಕೊಂಡದ್ದಾಯಿತು; ಇದಿಷ್ಟೂ ಸಾಲದು ಎಂದು ನನಗೆ ಮದುವೆ ಬೇರೆ ಮಾಡಿಬಿಟ್ಟರು. ಈಗ ತಾನೆ ಆ ಬಂಧನಗಳನ್ನೆಲ್ಲ ಕಳಚಿ ಕೊಂಡು ಸ್ವತಂತ್ರವಾಗಿ ಬಾಳೋಣ ಎಂದುಕೊಳ್ಳುವಷ್ಟರಲ್ಲಿ ಈ ದರಿದ್ರ ಹುಡುಗರು ಬಂದು ನನ್ನನ್ನು ಹೀಗೆ ಕಟ್ಟಿಹಾಕಿ, ಈ ಸಮುದ್ರದ ಮಧ್ಯೆ ಎಸೆದುಬಿಟ್ಟಿದ್ದಾರೆ. ಇಲ್ಲಿ ಹೀಗೆ ನಾನು ಪಡಬಾರದ ಪಾಡು ಪಡುತ್ತಿದ್ದರೆ, ಅಲ್ಲಿ ಆ ರಾಜನ ಕುದುರೆಗೆ ಮಾತ್ರ ಚಿನ್ನದ ಲಾಳ, ಚಿನ್ನದ ಎಕ್ಕಡ! ಈ ಅನ್ಯಾಯ ನನ್ನ ಮನಸ್ಸನ್ನು ಕೊರೆದ ಹಾಗೆ ಯಾವುದೂ ಕೊರೆದಿಲ್ಲ. ಆದರೆ ಈ ಲೋಕದಲ್ಲಿ ನ್ಯಾಯ ಎಲ್ಲಿ ಬಂತು? ಧರ್ಮ ಎಲ್ಲಿ ಬಂತು! ನಾನು ಹುಟ್ಟಿದ್ದು ಎಲ್ಲಿ, ಬೆಳೆದದ್ದು ಹೇಗೆ, ಎಷ್ಟು ಸಂಚಾರಮಾಡಿದ್ದೇನೆ— ಇದನ್ನೆಲ್ಲಾ ಕೇಳುವವರು ಯಾರು? ನನ್ನ ಸಾಹಸ ಕೃತ್ಯಗಳನ್ನು ತಿಳಿದು ಸಂತೋಷಪಡುವ ಅದೃಷ್ಟ ಈ ಲೋಕಕ್ಕೇ ಇಲ್ಲ. ಆ ಅದೃಷ್ಟ ಈ ಲೋಕಕ್ಕೆ ಇದ್ದಿದ್ದರೆ, ಅಂದೇ ಆ ಲಾಯದಲ್ಲಿ ಲಾಳೆದವನೆದುರಿಗೆ ನಾನು ಕಾಲು ನೀಡಿದಾಗಲೇ ನನಗೆ ಚಿನ್ನದ ಎಕ್ಕಡ ಕೊಡಬೇಕಾಗಿತ್ತು. ನನಗೂ ಚಿನ್ನದ ಎಕ್ಕಡ ಕೊಟ್ಟಿದ್ದಿದ್ದರೆ ನಾನೂ ಆ ಲಾಯಕ್ಕೆ ಅಲಂಕಾರಪ್ರಾಯ ನಾಗುತ್ತಿದ್ದೆ. ಆದರೆ ನನ್ನಂತಹವನನ್ನು ಇರಿಸಿಕೊಳ್ಳುವ ಅದೃಷ್ಟ ಆ ಲಾಯಕ್ಕೂ ಇಲ್ಲ. ಸರಿಯೆ, ನನಗೂ ಈ ಲೋಕಕ್ಕೂ ತೊರೆದುಹೋದ ಹಾಗೆಯೇ!" ಎಂದು ತನಗೆ ತಾನೇ ಹೇಳಿಕೊಂಡಿತು.

ಆದರೆ ಆ ಹುಳುವಿನ ಕಥೆ ಇನ್ನೂ ಮುಗಿಯುವ ಹಾಗಿರಲಿಲ್ಲ. ಯಾರೋ ಕೆಲವರು ಹುಡುಗಿಯರು ಆ ಕೊಳದ ನಡುವೆ ದೋಣಿಯಲ್ಲಿ ಕುಳಿತು ಬರುತ್ತಿದ್ದರು.

"ಅಲ್ಲಿ ನೋಡೆ! ಯಾವುದೋ ಮುರುಕು ಮರದ ಬಟ್ಟಲು ತೇಲಿ ಕೊಂಡು ಬರುತ್ತಿದೆ!" ಎಂದು ಒಬ್ಬಳು ಕೂಗಿದಳು.

"ಅದರಲ್ಲಿ ಯಾವುದೋ ಹುಳುವನ್ನು ಕಟ್ಟಿಹಾಕಿದ್ದಾರೆ, ನೋಡೆ!" ಎಂದು ಇನ್ನೊಬ್ಬಳು ಕೂಗಿದಳು.

ಅವರ ದೋಣಿ ಆ ಹುಳುವಿನ ನಾವೆಯ ಹತ್ತಿರ ಬಂತು. ಆ ಹುಡುಗಿಯರಲ್ಲಿ ಒಬ್ಬಳು ಆ ಸಗಣಿಹುಳುವನ್ನು ಕೈಗೆತ್ತಿಕೊಂಡು, ತನ್ನ ಜೇಬಿನಿಂದ ಒಂದು ಸಣ್ಣ ಕತ್ತರಿಯನ್ನು ತೆಗೆದು, ಅದಕ್ಕೆ ಕಟ್ಟಿದ್ದ ನಾರನ್ನು ಅದಕ್ಕೆ ನೋವಾಗದ ಹಾಗೆ ಕತ್ತರಿಸಿದಳು. ದೋಣಿ ದಡಕ್ಕೆ ಬಂದಾಗ ಅದನ್ನು ಹುಲ್ಲಿನ ಮೇಲಿರಿಸಿ, "ಹೋಗು, ಹುಳು, ಹೋಗು. ಹಾರುವುದಕ್ಕೆ ಆದರೆ ಹಾರಿಹೋಗು. ಹುಳುವಾದರೆ ತಾನೆ ಏನು? ಸ್ವಾತಂತ್ರ್ಯವೆಂದರೆ ಸಂತೋಷವಲ್ಲವೆ!" ಎಂದಳು.

ಸಗಣಿಹುಳು ರೆಕ್ಕೆ ಬಿಚ್ಚಿಕೊಂಡು ಹಾರಿತು. ಹಾರಿತು. ಇನ್ನೂ ಹಾರಿತು. ಎದುರಿಗೆ ಒಂದು ದೊಡ್ಡ ಮನೆಯ ದೊಡ್ಡ ಕಿಟಕಿ ಕಾಣಿಸಿತು. ಸಗಣಿಹುಳು ಆ ಕಿಟಕಿಯ ಮೂಲಕ ಹಾರಿ, ಅಲ್ಲಿದ್ದ ಕುದುರೆಯ ಕತ್ತಿನ ಮೇಲೆ ಇಳಿದು ಕುಳಿತುಕೊಂಡಿತು. ಸುತ್ತ ನೋಡಿದರೆ, ತಾನು ಹಿಂದೆ ಬಿಟ್ಟುಹೋದ ಅದೇ ಅರಸನ ಲಾಯ! ಅದೇ ಅರಸನ ಕುದುರೆ!

"ಸದ್ಯಃ ಮನೆಗೆ ಬಂದೆನಲ್ಲಾ!" ಎಂದು ಸಗಣಿಹುಳು ನಿಟ್ಟುಸಿರು ಬಿಟ್ಟು, ಕುದುರೆಯ ಕತ್ತಿನ ಮೇಲೆ ಕುಳಿತು ಆಯಾಸ ಪರಿಹಾರ ಮಾಡಿಕೊಂಡಿತು.

ಸ್ವಲ್ಪ ಹೊತ್ತಾದ ಮೇಲೆ "ಇದೋ, ಅರಸನ ಕುದುರೆಯ ಮೇಲೆ, ನಾನೂ ಅರಸನ ಹಾಗೆಯೇ ಏರಿಕೊಂಡು ಕುಳಿತಿದ್ದೇನೆ. ಹೌದು, ಆ ದಿವಸ ಲಾಳದವನು ಅದೇನು ಹೇಳಿದ? 'ಅರಸನ ಕುದುರೆಗೆ ಚಿನ್ನದ ಎಕ್ಕಡ ಏಕೆ ಕೊಡುತ್ತಾರೆ, ಗೊತ್ತೊ?' ಎಂದಲ್ಲವೆ? ಹೌದು, ಈಗ ನನಗೆ ಗೊತ್ತಾಯಿತು. ಈ ಕುದುರೆಯ ಮೇಲೆ ನಾನು ಕುಳಿತು ಸವಾರಿಮಾಡುವೆನೆಂದು ಇದಕ್ಕೆ ಚಿನ್ನದ ಎಕ್ಕಡ ಕೊಟ್ಟಿದ್ದಾರೆ" ಎಂದುಕೊಂಡಿತು.

ಹಾಗೆಂದುಕೊಂಡದ್ದರಿಂದ ಅದರ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು. ಸೂರ್ಯನ ಕಿರಣ ಆ ಲಾಯದೊಳಕ್ಕೆ ಹೊಳೆಯಾಗಿ ಹರಿದುಬಂತು. ಸುತ್ತ ಎತ್ತಲೂ ಬೆಳಕು, ಪ್ರಕಾಶ, ಪ್ರಭೆ ತುಂಬಿ ಹೋಯಿತು.

ಸಗಣಿಹುಳು ಸಂತೋಷದಿಂದ ಉಬ್ಬಿಹೋಗಿ, "ಲೋಕಸಂಚಾರ ಮಾಡಿಕೊಂಡು ಬಂದರೆ ಮನಸ್ಸು ವಿಶಾಲವಾಗುತ್ತದೆ. 'ಬಂದದ್ದೆಲ್ಲಾ ಬರಲಿ, ಅದು ನಮಗೆ ಒಳ್ಳೆಯದಾಗಿರಲಿ' ಎಂಬ ಭಾವನೆಯೊಂದಿದ್ದರೆ, ಈ ಪ್ರಪಂಚದಲ್ಲಿ ಬಾಳಿ ಬದುಕುವುದು ಅಷ್ಟೇನೂ ಕಷ್ಟವಲ್ಲ" ಎಂದುಕೊಂಡಿತು.

# ಬಟಾಣಿ ಹೂ

ಹಿಂದೆ ಒಂದು ಬಟಾಣಿ ಕಾಯಿಯಲ್ಲಿ ಐದು ಬಟಾಣಿ ಕಾಳುಗಳಿದ್ದುವು. ಕಾಯಿ ಹಸುರಾಗಿತ್ತು, ಒಳಗಿನ ಕಾಳೂ ಹಸುರಾಗಿತ್ತು; ಆದ ಕಾರಣ ಪ್ರಪಂಚವೆಲ್ಲಾ ಹಸುರಾಗಿಯೇ ಇದೆ ಎಂದು ಅವು ತಿಳಿದುಕೊಂಡಿದ್ದುವು. ಅದು ಸಹಜ ತಾನೆ!

ಕಾಯಿ ಬೆಳೆಯಿತು, ಕಾಳುಗಳೂ ಬೆಳೆದುವು, ತಮ್ಮ ತಮ್ಮ ಸ್ಥಳಕ್ಕೆ ಹೊಂದಿಕೊಂಡು, ಸಾಲಾಗಿ ಕುಳಿತವು. ಸೂರ್ಯನ ಬೆಳಕು ಹೊರಗೆ ಬೆಳಗಿ ಕಾಯಿಗೆ ಕಾವು ಕೊಟ್ಟಿತು. ಮಳೆ ಅದರ ಮೇಲೆ ಬಿದ್ದು ಅದಕ್ಕೆ ಮೆರಗು ಬಂತು. ಹಗಲು ಬೆಳಕಿನಲ್ಲಿ ಅದು ಕಣ್ಣಿಗೆ ಮೃದುವಾಗಿಯೂ ಹಿತವಾಗಿಯೂ ಇರುತ್ತಿತ್ತು, ರಾತ್ರಿಯಾಗುತ್ತಲೇ ಕಪ್ಪಾಗುತ್ತಿತ್ತು. ಅದೂ ಸಹಜ ತಾನೆ!

ಹೀಗೆ ಬಟಾಣಿ ಕಾಳುಗಳು ಕಾಯಿಯೊಳಗೆ ಸಾಲಾಗಿ ಕುಳಿತು ದಿನದಿನಕ್ಕೆ ದೊಡ್ಡವಾಗಿ ಬೆಳೆದುವು. ಬೆಳೆದ ಹಾಗೆಲ್ಲಾ 'ನಾವು ಮಾಡಬೇಕಾದದ್ದು ಏನೋ ಇರಬೇಕು' ಎಂದು ಅವಕ್ಕೆ ಎನ್ನಿಸಿತು. ಆದರೆ ತಾವು ಮಾಡಬೇಕಾದದ್ದು ಏನು ಎಂಬುದು ತಿಳಿಯದೆ ಸುಮ್ಮನೆ ಚಿಂತಿಸಿದುವು.

ಅವುಗಳಲ್ಲಿ ಒಂದು ಕಾಳು "ಏನು, ನಾವು ಇಲ್ಲಿ ಸದಾ ಕಾಲಕ್ಕೂ ಹೀಗೇ ಕುಳಿತಿರಬೇಕೇನು? ಹೀಗೇ ಸುಮ್ಮನೆ ಕುಳಿತಿದ್ದರೆ ನಾವು ಕಠಿಣವಾಗಿಹೋಗುವುದಿಲ್ಲವೆ? ಹೊರಗಡೆ ಏನೋ ನಾವು ಮಾಡಬೇಕಾದದ್ದು ಇದೆ ಎಂದು ನನಗೆ ಖಂಡಿತವಾಗಿ ಎನ್ನಿಸುತ್ತದೆ" ಎಂದಿತು.

ಕೆಲವು ವಾರಗಳು ಕಳೆದುವು. ಕಾಯಿ ಹಳದಿಯ ಬಣ್ಣಕ್ಕೆ ತಿರುಗಿತು, ಒಳಗಿನ ಕಾಳುಗಳೂ ಹಳದಿಯ ಬಣ್ಣಕ್ಕೆ ತಿರುಗಿದವು.

"ಪ್ರಪಂಚವೆಲ್ಲಾ ಹಳದಿಯಾಗುತ್ತಿದೆ ಎಂದು ತೋರುತ್ತದೆ" ಎಂದು ಅವು ಎಂದುಕೊಂಡವು. ಬಹುಶಃ, ಅವು ಹೇಳಿದುದು ಸರಿಯೇ ಇರಬೇಕು.

ಇದ್ದಕ್ಕಿದ್ದ ಹಾಗೆ ಯಾರೋ ಆ ಕಾಯನ್ನು ಹಿಡಿದು ಕಿತ್ತ ಹಾಗಾಯಿತು. ಯಾರ ಕೈಯೋ ಅದನ್ನು ಕಿತ್ತು, ಇತರ ಕಾಯಿಗಳ ಜೊತೆಗೆ ಒಂದು ಜೇಬಿನಲ್ಲಿ ತುರುಕಿದ ಹಾಗಾಯಿತು.

"ಅಬ್ಬ! ಈಗ ಕಾಯನ್ನು ಸುಲಿದು ನಮ್ಮನ್ನು ಬಿಡುಗಡೆ ಮಾಡುತ್ತಾರೆ" ಎಂದು ಒಂದು ಕಾಳು ಹೇಳಿತು. ಮಿಕ್ಕ ಕಾಳುಗಳಿಗೆ ಬೇಕಾಗಿದ್ದುದೂ ಅದೇ.

ಆ ಐದರಲ್ಲಿ ಅತಿ ಚಿಕ್ಕದಾದ ಒಂದು ಕಾಳು "ನಮ್ಮಲ್ಲಿ ಯಾರು ಅತಿ ದೂರ ಓಡುತ್ತಾರೋ ನೋಡಬೇಕು" ಎಂದಿತು.

ಅವುಗಳಲ್ಲಿ ಅತಿ ದೊಡ್ಡದಾದ ಬಟಾಣಿ "ಏನು ಆಗಬೇಕೋ ಅದು ಆಗಿಯೇ ಆಗುತ್ತದೆ" ಎಂದಿತು.

ಫಳ್ಳೆಂದು ಕಾಯಿ ಸೀಳಿತು. ಐದು ಕಾಳುಗಳೂ ಬೆಳಗುವ ಬಿಸಿಲಿಗೆ ಉರುಳಿದುವು. ಅವು ಐದೂ ಒಂದು ಸಣ್ಣ ಮಗುವಿನ ಕೈಯಲ್ಲಿ ಮಲಗಿದುವು. ಆ ಹುಡುಗ ಅವುಗಳನ್ನು ತನ್ನ ಕೈಯಲ್ಲಿ ಬಿಗಿಯಾಗಿ ಹಿಡಿದು, "ಈ ಬಟಾಣಿ ನನ್ನ ಪೆಟ್ಟಲಿಗೆ ಸರಿಯಾಗಿ ಆಗುತ್ತದೆ" ಎಂದುಕೊಂಡು, ಒಡನೆಯೆ ಒಂದು ಬಟಾಣಿಯನ್ನು ಪೆಟ್ಟಲಿನ ಕೊಳವೆಗೆ ಹಾಕಿ, ನೆಲದ ಮೇಲೆ ಪೆಟ್ಟಿದ.

ಆ ಬಟಾಣಿ "ಇದೋ ನಾನು ಗಗನಕ್ಕೆ ಚಿಮ್ಮುತ್ತೇನೆ. ನಿಮ್ಮ ಕೈಲಾದರೆ ನನ್ನನ್ನು ಹಿಡಿಯಿರಿ, ನೋಡೋಣ" ಎಂದು ಚಿಮ್ಮಿತು.

ಎರಡನೆಯ ಕಾಳು "ನಾನು ನೇರವಾಗಿ ಹೋಗಿ ಸೂರ್ಯನನ್ನೇ ಭೇದಿಸುತ್ತೇನೆ" ಎಂದು ತಾನೂ ಚಿಮ್ಮಿತು.

ಅದರ ಪಕ್ಕದಲ್ಲಿದ್ದ ಇನ್ನೆರಡು "ಎಲ್ಲಿಗೆ ಹೋದರೂ ಒಂದೇ. ಹೋದ ಕಡೆ ನಿದ್ರೆಮಾಡಿದರಾಯಿತು" ಎಂದುಕೊಂಡವು. ಹಾಗೆಂದುಕೊಂಡದ್ದಕ್ಕೆ ಸರಿಯಾಗಿ ಅವು ನೆಲದ ಮೇಲೆ ಬಿದ್ದು, ಸ್ವಲ್ಪ ದೂರ

ಉರುಳಿ, ಒಂದು ಕಡೆ ನಿಂತವು. ಆದರೆ ಹುಡುಗನೇನೂ ಅವುಗಳನ್ನು ಸುಮ್ಮನೆ ಬಿಡಲಿಲ್ಲ. ಅವುಗಳನ್ನೂ ಪೆಟ್ಟಿಲಿಗೆ ಹಾಕಿ ಪೆಟ್ಟಿದ. "ಮಿಕ್ಕವುಗಳಿಗಿಂತ ನಾವು ಇನ್ನೂ ಮುಂದೆ ಹೋಗುತ್ತೇವೆ" ಎಂದುಕೊಂಡವು.

ಕಡೆಯ ಕಾಳು ಮಾತ್ರ, ಪೆಟ್ಟಿಲಿನಿಂದ ಸಿಡಿಯುವಾಗ "ಏನು ಆಗಬೇಕೋ ಅದು ಆಗಿಯೇ ಆಗುತ್ತದೆ" ಎಂದುಕೊಂಡೇ ಸಿಡಿಯಿತು. ಸೂರಿನ ಹತ್ತಿರ ಕಿಟಿಕಿಯ ಹಲಗೆಗೆ ತಗುಲಿ, ಹೊರಗಿನ ಗೋಡೆಯ ಬಿರುಕಿನಲ್ಲಿ ಬಿತ್ತು. ಬಿರುಕಿನಲ್ಲಿದ್ದ ಮೃದುವಾದ ಮಣ್ಣಿನ ಮಧ್ಯೆ, ಪಾಚಿಯ ನಡುವೆ ಆ ಕಾಳು ಮುಚ್ಚಿಹೋಯಿತು. ಅಲ್ಲಿ ಅದು ಸೆರೆ ಸಿಕ್ಕಿ ಕಣ್ಣಿಗೆ ಕಾಣದ ಹಾಗೆ ಮಲಗಿದ್ದರೂ ಅದು ದೇವರ ದೃಷ್ಟಿಯಿಂದ ಮರೆಯಾಗಿರಲಿಲ್ಲ.

"ಏನು ಆಗಬೇಕೋ ಅದು ಆಗಿಯೇ ಆಗುತ್ತದೆ." ಎಂದು ಆ ಕಾಳು ತನಗೆ ತಾನೇ ಹೇಳಿಕೊಂಡಿತು.

ಆ ಕಿಟಿಕಿಯಿದ್ದ ಅಟ್ಟದಲ್ಲಿ ಒಬ್ಬಳು ಬಡವಿ ಇದ್ದಳು. ಅವಳು ದಿನವೂ ಹೊರಗೆ ಹೋಗಿ ಕೂಲಿ ಮಾಡಿಕೊಂಡು ಸಂಪಾದಿಸಿ ಬದುಕುತ್ತಿದ್ದಳು. ಆದರೂ, ಎಷ್ಟೇ ದುಡಿದರೂ ಅವಳ ದಾರಿದ್ರ್ಯ ಏನೂ ಕಡಿಮೆಯಾಗಲಿಲ್ಲ. ಅದೇ ಅಟ್ಟದಲ್ಲಿ ಅವಳ ಒಬ್ಬಳೇ ಮಗಳು, ಇನ್ನೂ ಚಿಕ್ಕ ವಯಸ್ಸಿನವಳು, ರೋಗಗ್ರಸ್ತಳಾಗಿ ಒಂದು ವರುಷದಿಂದ ಹಾಸಿಗೆ ಹಿಡಿದು ಮಲಗಿದ್ದಳು. ಅವಳು ಬದುಕುತ್ತಾಳೋ ಅಥವಾ ಸಾಯುತ್ತಾಳೋ ಎಂಬುದು ಸಂದೇಹವಾಗಿತ್ತು.

"ಸರಿ. ಇವಳೂ ಇವಳ ತಂಗಿಯ ಜೊತೆಗೇ ಹೋಗುತ್ತಾಳೆ. ನನಗೆ ಎರಡು ಮಕ್ಕಳಿದ್ದುವು. ಅವು ಎರಡನ್ನೂ ಕಾಪಾಡುವುದು ನನಗೇನೂ ಸುಲಭವಾಗಿರಲಿಲ್ಲ. ಆದರೆ ದಯಾಮಯನಾದ ದೇವರು ನನ್ನ ಕಷ್ಟವನ್ನು ನೋಡಲಾರದೆ ಒಂದು ಮಗುವಿನ ಪಾಲನೆಯನ್ನು ತಾನು ವಹಿಸಿಕೊಂಡ. ನಾನಾದರೂ ಉಳಿದ ಮಗುವಿನ ರಕ್ಷಣೆಯನ್ನು ಸಂತೋಷದಿಂದ ಮಾಡುತ್ತಿದ್ದೇನೆ. ಆದರೆ ಎರಡು ಮಕ್ಕಳೂ ಒಬ್ಬರನ್ನೊಬ್ಬರು ಅಗಲಬಾರದೆಂದು ದೈವೇಚ್ಛೆಯೋ ಏನೋ! ಇವಳೂ ತನ್ನ ತಂಗಿಯ ಜೊತೆಗೇ ಹೋಗುವಳೋ ಏನೋ!" ಎಂದು ಆ ತಾಯಿ

ಎಂದುಕೊಂಡಳು. ಆದರೆ ಆ ಕಾಯಿಲೆ ಹುಡುಗಿ ಮಾತ್ರ ಸದ್ದಿಲ್ಲದೆ, ಶಾಂತವಾಗಿ, ತನ್ನ ತಾಯಿಗೆ ಏನೂ ತೊಂದರೆ ಕೊಡದೆ, ಮಲಗಿದ ಕಡೆಯಲ್ಲಿ ಹಾಗೇ ಮಲಗಿರುತ್ತಿದ್ದಳು.

ವಸಂತಮಾಸ ಬಂತು. ಒಂದು ದಿನ ಬೆಳಗ್ಗೆ ಸೂರ್ಯ ತನ್ನ ಪ್ರಕಾಶವನ್ನು ಚೆಲ್ಲುತ್ತ, ಆ ಅಟ್ಟದ ಕಿಟಕಿಯ ಮೂಲಕ ತನ್ನ ಕಿರಣಗಳನ್ನು ಒಳಕ್ಕೆ ಎಸೆದ. ಆಗ ತಾನೆ ಆ ತಾಯಿ ತಾನು ಕೆಲಸಮಾಡುವುದಕ್ಕೆ ಹೊರಟಿದ್ದಳು. ಆಗ ಕಾಯಿಲೆ ಹುಡುಗಿ, ಕಿಟಕಿಯ ಬುಡದ ಗಾಜನ್ನೇ ದೃಷ್ಟಿಸುತ್ತ, "ಅಮ್ಮ, ಅದೇನದು, ಕಿಟಕಿಯಲ್ಲಿ ಹಸುರಾಗಿ ಇಣಿಕಿ ನೋಡುತ್ತಿರುವುದು? ಅದೇನೋ ಗಾಳಿಗೆ ಅಲುಗಾಡುತ್ತಿದೆ, ನೋಡು" ಎಂದು ಕರೆದಳು.

ತಾಯಿ, ಹೊರಟಿದ್ದವಳು, ನಿಂತು, ಕಿಟಕಿಯನ್ನು ಅರ್ಧ ತೆರೆದು, "ಓ, ಯಾವುದೋ ಪುಟ್ಟ ಬಟಾಣಿ! ಇಲ್ಲೇ ಬೇರು ಬಿಟ್ಟು ಮೊಳಕೆ ಒಡೆದಿದೆ! ಇದರ ಹಸುರು ಎಲೆ ನೋಡು! ಇದೆಲ್ಲಿಂದ ಬಂತು, ಇಲ್ಲಿ? ಆಯಿತಲ್ಲ, ಮಗು. ನಿನಗೆ ಆಟವಾಡುವುದಕ್ಕೆ ಒಂದು ತೋಟವೇ ಸಿಕ್ಕಿದ ಹಾಗಾಯಿತು" ಎಂದು, ಮಗುವಿನ ಹಾಸಿಗೆಯನ್ನು ಕಿಟಕಿಯ ಹತ್ತಿರಕ್ಕೆ ಎಳೆದು, ತಾನು ತನ್ನ ಕೂಲಿಕೆಲಸಕ್ಕೆ ಹೊರಟಳು.

ಸಂಜೆ, ತಾಯಿ ಹಿಂದಿರುಗಿ ಬಂದಾಗ, "ಅಮ್ಮಾ, ಇನ್ನು ನಾನು ಬೇಗನೆ ಗುಣವಾಗುತ್ತೇನೆ. ಈ ದಿನವೆಲ್ಲಾ ಬಿಸಿಲು ಎಷ್ಟು ಪ್ರಕಾಶಮಾನವಾಗಿತ್ತು! ಈ ಬಟಾಣಿ ಕೂಡ ಹೇಗೆ ಬೆಳೆಯುತ್ತಿದೆ, ನೋಡು. ನಾನೂ ಹೀಗೆಯೇ ಗುಣವಾಗಿ, ನಾನೂ ಬಿಸಿಲಿನಲ್ಲಿ ಆಡಲು ಹೊರಗೆ ಹೋಗುತ್ತೇನೆ" ಎಂದು ಆ ಕಾಯಿಲೆ ಹುಡುಗಿಯೆಂದಳು.

ತಾಯಿಯಾದರೋ ಹುಡುಗಿಯ ಮಾತು ನಿಜವಾಗುವುದೆಂದು ನಂಬಲಾರಳು. ಆದರೂ "ದೇವರು ನಿನ್ನ ಇಷ್ಟವನ್ನು ಪೂರೈಸಲಿ" ಎಂದಳು. ತನ್ನ ಮಗುವಿಗೆ ಹೀಗೆ ಬದುಕುವೆನೆಂಬ ಭರವಸೆಯನ್ನು ಉಂಟುಮಾಡಿದ ಆ ಹಸಿರು ಬಳ್ಳಿ ಗಾಳಿಗೆ ಸಿಕ್ಕಿ ಮುರಿದುಹೋಗದಿರಲೆಂದು ಅದರ ಪಕ್ಕದಲ್ಲಿ ಒಂದು ಕೋಲನ್ನು ಚುಚ್ಚಿ, ಅದಕ್ಕೆ ಆ ಬಳ್ಳಿಯನ್ನು ಹಬ್ಬಿಸಿದಳು. ಬಳ್ಳಿ ಬೆಳೆದಾಗ ಹಬ್ಬಿಕೊಳ್ಳುವುದಕ್ಕೆ ಅನುಕೂಲ

ವಾಗಲೆಂದು ಕಿಟಕಿಯ ಮೇಲುಕಟ್ಟಿಗೆ ದಾರ ಕಟ್ಟಿದಳು. ಬಳ್ಳಿ ಬೆಳೆ ಯಿತು, ದಿನದಿನಕ್ಕೂ ಹಬ್ಬಿತು.

ಒಂದು ದಿನ ಬೆಳಗ್ಗೆ ಆ ಮುದುಕಿ "ಓಹೋ, ಒಂದು ಹೂ ಕೂಡ ಬಂದುಬಿಟ್ಟಿದೆ!" ಎಂದಳು. ತನ್ನ ಕಾಯಿಲೆ ಮಗಳು ಗುಣಮುಖವಾಗಿ ಚೇತರಿಸಿಕೊಳ್ಳುವಳೆಂದು ಈಗ ಅವಳಿಗೆ ನಂಬಿಕೆ ಸ್ವಲ್ಪಸ್ವಲ್ಪವಾಗಿ ಬಂದಿತು. ಕೆಲವು ದಿವಸಗಳಿಂದ ಈಚೆಗೆ ಮಗು ಗೆಲುವಾಗಿ ನಗುಮುಖ ದಿಂದ ಮಾತಾಡುತ್ತಿದ್ದಾಳೆ ಎಂಬುದನ್ನೂ ಬೆಳಗಾಗುತ್ತಲೇ ಹಾಸಿಗೆಯಲ್ಲಿ ಹಾಗೇ ಎದ್ದು ಒರಗಿಕೊಂಡು ಒಂದೇ ಒಂದು ಬಟಾಣಿ ಬಳ್ಳಿಯಿದ್ದ ತನ್ನ ತೋಟವನ್ನು ಸಂತೋಷ ತುಳುಕುವ ಕಣ್ಣುಗಳಿಂದ ದಿಟ್ಟಿಸುತ್ತಿದ್ದಾಳೆ ಎಂಬುದನ್ನೂ ಜ್ಞಾಪಿಸಿಕೊಂಡಳು.

ಒಂದು ವಾರ ಮುಗಿಯುವುದರೊಳಗಾಗಿ ಆ ಕಾಯಿಲೆ ಹುಡುಗಿ ಒಂದು ಇಡಿಯ ಗಂಟೆಯ ಕಾಲ ಕಿಟಕಿಯ ಹತ್ತಿರ ಸುಖದಿಂದ ಕುಳಿತಿ ದ್ದಳು. ಕಿಟಕಿಯ ಹೊರಗಡೆ ಆ ಸಣ್ಣ ಬಳ್ಳಿ. ಅದರಲ್ಲಿ ನಸುಗೆಂಪಿನ ಬಟಾಣಿ ಹೂ ಅರಳಿಕೊಂಡಿತ್ತು. ಪುಟ್ಟಹುಡುಗಿ ಕೆಳಗೆ ಬಗ್ಗಿ ಆ ಬಳ್ಳಿಯ ಕೋಮಲವಾದ ಎಲೆಗಳಿಗೆ ಮೃದುವಾಗಿ ಮುತ್ತಿಕ್ಕಿದಳು. ಆ ದಿವಸ ಅವಳ ಪಾಲಿಗೆ ಹಬ್ಬದ ದಿವಸವಾಗಿತ್ತು.

ತಾಯಿ ಮಗಳ ಹಿಗ್ಗನ್ನು ಕಂಡು, ಆ ಹೂವನ್ನು ಸಾಕ್ಷಾತ್ ದೇವ ದೂತನೆಂದೇ ಭಾವಿಸಿ, "ಆ ದೇವರೇ ಈ ಬಟಾಣಿಯನ್ನು ಇಲ್ಲಿ ನೆಟ್ಟು, ಇಲ್ಲಿ ಬೆಳೆಸಿದವನು. ನನಗೂ ನನ್ನ ಮಗುವಿಗೂ ಹೊಸ ಜೀವವನ್ನು ತುಂಬಲು ಆತನೇ ಇದನ್ನು ಇಲ್ಲಿ ಹಬ್ಬಿಸಿದವನು" ಎಂದು ತಾನೂ ಹಿಗ್ಗಿದಳು.

ಆದರೆ, ಆ ಉಳಿದ ಕಾಳುಗಳ ಗತಿ ಏನಾಯಿತು? "ನಿಮ್ಮ ಕೈಲಾದರೆ ನನ್ನನ್ನು ಹಿಡಿದುಕೊಳ್ಳಿ" ಎಂದು ಸಿಡಿಯಿತಲ್ಲಾ, ಆ ಬಟಾಣಿ ಒಂದು ಮನೆಯ ಮಾಳಿಗೆಯ ಮೇಲೆ ಬಿತ್ತು. ಅದನ್ನು ಯಾವುದೋ ಪಾರಿವಾಳ ಕವಳಿಸಿಬಿಟ್ಟಿತು. ಆ ಇನ್ನೆರಡು, "ಎಲ್ಲಿ ಬಿದ್ದರೆ ಅಲ್ಲೇ ನಿದ್ರೆ ಹೋದೇವು" ಎಂದುಕೊಂಡ ಆ ಸೋಮಾರಿ ಬಟಾಣಿಗಳು, ಅವು ಕೂಡ ಪಾರಿವಾಳಗಳ ಹೊಟ್ಟೆಗೆ ಸೇರಿ, ತಮ್ಮ ಜನ್ಮವನ್ನು ಸಾರ್ಥಕ

ಮಾಡಿಕೊಂಡವು. ಆದರೆ ನಾಲ್ಕನೆಯದು ಮಾತ್ರ, "ಸೂರ್ಯನನ್ನು ಭೇದಿಸುತ್ತೇನೆ" ಎಂದು ಸಿಡಿದ ಬಟಾಣಿ, ಯಾವುದೋ ಬಚ್ಚಲಿಗೆ ಬಿದ್ದು, ಅಲ್ಲಿನ ಕೊಚ್ಚೆ ನೀರಿನಲ್ಲಿ ಅನೇಕ ದಿನ, ಅನೇಕ ವಾರ ನಿಂತು, ನೀರು ಕುಡಿದು ಕುಡಿದು ಊದಿಕೊಂಡಿತು.

"ನನಗೆ ಒಳ್ಳೇ ಚೆನ್ನಾಗಿ ಬೊಜ್ಜು ಬರುತ್ತಿದೆಯಲ್ಲ. ಹೀಗಾದರೆ ನಾನು ಬಿರಿದುಹೋಗುವುದು ಖಂಡಿತ. ನಾವು ಒಟ್ಟಿಗೆ ಹುಟ್ಟಿದ ಐವರು ಅಣ್ಣತಮ್ಮಂದಿರಲ್ಲಿ ನಾನು ಒಬ್ಬನೇ ಎಂದು ಕಾಣುತ್ತದೆ, ಹೀಗೆ ಊದಿ, ಬೊಜ್ಜು ಬೆಳೆಸಿ, ಬಿರಿದವನು!" ಎಂದು ಆ ನಾಲ್ಕನೆಯದು ಎಂದುಕೊಂಡಿತು. ಬಚ್ಚಲು "ಹೌದು, ಹೌದು" ಎಂದು ಅದರ ಅಭಿಪ್ರಾಯವನ್ನು ಅನುಮೋದಿಸಿತು.

ಆದರೆ ಆ ಅಟ್ಟದ ಕಿಟಕಿಯನ್ನು ತೆರೆದು, ಕಣ್ಣುಗಳು ಫಳಫಳನೆ ಮಿರುಗುತ್ತ, ಕೆನ್ನೆಯ ಮೇಲೆ ಗುಲಾಬಿಯ ಬಣ್ಣ ಮಿನುಗುತ್ತ ನಿಂತಿದ್ದ ಪುಟ್ಟ ಕನ್ಯೆ ತನ್ನ ತೆಳುವಾದ ಕೈಗಳಿಂದ ಬಟಾಣಿ ಹೂವನ್ನು ಮೃದುವಾಗಿ ಸವರಿ, ದೇವರ ಅಪಾರವಾದ ದಯೆಗೆ ಕೃತಜ್ಞತೆಯನ್ನು ಸಮರ್ಪಿಸಿದಳು.

ಬಚ್ಚಲು ಮಾತ್ರ "ಏನೇ ಹೇಳಿದರೂ, ನನ್ನ ಬಟಾಣಿಯ ಸಮ ಬೇರೆ ಯಾವುದೂ ಇಲ್ಲ" ಎಂದಿತು.

# ಹಂದಿಕುರುಬ

ಹಿಂದೆ ಒಬ್ಬಾನೊಬ್ಬ ರಾಜಕುಮಾರನಿದ್ದ. ಅವನಿಗೆ ತನ್ನ ಸ್ವಂತವಾದ ಒಂದು ರಾಜ್ಯವಿತ್ತಾದರೂ, ಹಣ ಇದ್ದದ್ದು ತುಂಬ ಸ್ವಲ್ಪವೇ. ಆದರೂ ಮದುವೆ ಮಾಡಿಕೊಂಡು ಹೆಂಡತಿಯನ್ನು ಕಾಪಾಡುವುದಕ್ಕೆ ಸಾಕಾದಷ್ಟು ಇದ್ದಕಾರಣ, ನೆರೆಯ ದೇಶದ ಚಕ್ರವರ್ತಿಯ ಮಗಳನ್ನು ಮದುವೆ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು.

ಹೀಗೆ ಆ ಚಕ್ರವರ್ತಿಯ ಅರಮನೆಗೆ ಹೋಗಿ, 'ನೀನು ನನ್ನನ್ನು ಮದುವೆಯಾಗುತ್ತೀಯಾ?' ಎಂದು ಆ ಚಕ್ರವರ್ತಿಯ ಮಗಳನ್ನು ಕೇಳಿದ ಆ ಬಡರಾಜಕುಮಾರನ ಧೈರ್ಯವೇ ಧೈರ್ಯ! ಆ ರಾಜಕುಮಾರ ಬಡವನಾದರೂ ಸುತ್ತಮುತ್ತ ಎಲ್ಲೆಲ್ಲೂ ಅವನು ಹೆಸರುವಾಸಿಯಾಗಿದ್ದ. ಅವನು ಹಾಗೆ ಕೇಳುವುದೇ ತಡ, 'ಆಗಬಹುದು' ಎಂದು ಹೇಳುವುದಕ್ಕೆ ನೂರಾರು ಜನ ರಾಜಕುಮಾರಿಯರು ಕಾಯ್ದಿದ್ದರು.

ಆದರೆ ಆ ಚಕ್ರವರ್ತಿಯ ಮಗಳು ಏನು ಉತ್ತರ ಕೊಟ್ಟಳು? ಏನು ಉತ್ತರ ಕೊಟ್ಟಳೋ ನೋಡೋಣ, ತಾಳಿ.

ಆ ರಾಜಕುಮಾರನ ತಂದೆಯ ಸಮಾಧಿಯ ಹತ್ತಿರ ಒಂದು ತೀರ ಅಪೂರ್ವವಾದ ಗುಲಾಬಿಗಿಡ ಬೆಳೆದಿತ್ತು. ಅದರಲ್ಲಿ ಐದು ವರುಷಗಳಿಗೆ ಒಂದುಸಲ ಹೂ ಬಿಡುತ್ತಿತ್ತು. ಆಗ ಕೂಡ ಅಲ್ಲಿ ಬಿಡುತ್ತಿದ್ದುದು ಒಂದೇ ಒಂದು ಗುಲಾಬಿಹೂ. ಅದು ಹೊರತು ಒಂದು ಮೊಗ್ಗು ಕೂಡ ಬಿಡುತ್ತಿರಲಿಲ್ಲ. ಆದರೆ ಆ ಒಂದು ಗುಲಾಬಿಯ ಪರಿಮಳ ಎಷ್ಟು ಸವಿಯಾಗಿತ್ತೆಂದರೆ – ಅದರ ವಾಸನೆ ನೋಡಿದ ಜನ ತಮ್ಮ ಕಷ್ಟಗಳನ್ನೂ ದುಃಖಗಳನ್ನೂ ಆ ಹೊತ್ತಿಗೆ ಮರೆತುಬಿಡುತ್ತಿದ್ದರು.

ಈ ಗುಲಾಬಿಗಿಡವೊಂದೇ ಅಲ್ಲದೆ ಆ ರಾಜಕುಮಾರನ ಹತ್ತಿರ ಒಂದು ಅಪೂರ್ವವಾದ ಕೋಗಿಲೆಯೂ ಇತ್ತು. ಅದು ಕಿವಿಗೆ ಇಂಪಾಗುವಂತೆ ಹಾಡುತ್ತಿದ್ದರೆ—ಪ್ರಪಂಚದಲ್ಲಿನ ಎಲ್ಲಾ ಲಲಿತವಾದ ಸ್ವರಗಳೂ ಅದರ ಕೊರಳಿನಲ್ಲಿಯೇ ಕುಳಿತಿರುವುದೋ ಎನ್ನಿಸುತ್ತಿತ್ತು.

ಇಂಥ ಗುಲಾಬಿಗಿಡವನ್ನೂ ಕೋಗಿಲೆಯನ್ನೂ ಆ ರಾಜಕುಮಾರನು ಆ ಚಕ್ರವರ್ತಿಯ ಮಗಳಿಗೆ ಮೀಸಲೆಂದು ತೆಗೆದಿಟ್ಟನು.

ಹೂವಿನ ಗಿಡವನ್ನೂ ಕೋಗಿಲೆಯನ್ನೂ ಜೋಪಾನದಿಂದ ಪ್ರತ್ಯೇಕವಾಗಿ ಎರಡು ಬೆಳ್ಳಿಯ ಪಾತ್ರೆಗಳಲ್ಲಿ ಮುಚ್ಚಿ, ಅವುಗಳನ್ನು ಚಕ್ರವರ್ತಿಯ ಮಗಳಿಗಾಗಿ ಅರಮನೆಗೆ ಕಳುಹಿಸಿದನು. ಅರಮನೆಯ ಸಭಾಭವನದಲ್ಲಿ ಚಕ್ರವರ್ತಿಯ ಮಗಳು ತನ್ನ ಸಖಿಯರೊಡನೆ ವಿನೋದದಿಂದ ಇದ್ದ ಸಮಯದಲ್ಲಿ ಆ ಎರಡು ಪಾತ್ರೆಗಳೂ ಬಂದವು. ಚಕ್ರವರ್ತಿಯ ಆಜ್ಞೆಯಂತೆ ಅಲ್ಲೇ ಆ ಎರಡು ಪಾತ್ರೆಗಳನ್ನೂ ಬಿಚ್ಚಿದರು. ಚಕ್ರವರ್ತಿಯ ಮಗಳು ಸಂತೋಷದಿಂದ ಚಪ್ಪಾಳೆ ತಟ್ಟುತ್ತ, "ಆಹಾ! ಒಳಗೆ ಒಂದು ಬೆಕ್ಕಿನ ಮರಿ ಇದ್ದರೆ ಎಷ್ಟು ಚೆನ್ನಾಗಿರುತ್ತದೊ!" ಎಂದು ಬಯಸಿದಳು.

ಅವಳು ಹಾಗೆನ್ನುತ್ತಿರುವಾಗ ಒಂದು ಬೆಳ್ಳಿಯ ಪಾತ್ರೆಯನ್ನು ಬಿಚ್ಚಿದರು. ಅದರೊಳಗಿದ್ದ ಸುಂದರವಾದ ಗುಲಾಬಿಯ ಗಿಡವನ್ನೂ ಪರಿಮಳವನ್ನು ಪಸರಿಸುತ್ತಿದ್ದ ಒಂಟಿ ಗುಲಾಬಿಯ ಹೂವನ್ನೂ ಕಂಡರು.

"ಆಹಾ, ಎಷ್ಟು ಚೆಲುವಾಗಿದೆ. ಗುಲಾಬಿಯ ಮಾಟ ಎಷ್ಟು ಚೆನ್ನಾಗಿದೆ!" ಎಂದು ಸಖಿಯರೆಲ್ಲರೂ ಅದನ್ನು ಹೊಗಳಿದರು.

ಚಕ್ರವರ್ತಿ ಕೂಡ "ಇಂಥ ಹೂವು ನಿಜವಾಗಿಯೂ ಅಪೂರ್ವವಾದದ್ದು. ತುಂಬ ಮನೋಹರವಾಗಿದೆ" ಎಂದನು.

ಆದರೆ ಚಕ್ರವರ್ತಿಯ ಮಗಳು ಕೈ ನೀಡಿ ಆ ಗಿಡವನ್ನು ಮುಟ್ಟಿದಾಗ "ಇದು ಚಮತ್ಕಾರದಿಂದ ಮಾಡಿದ ಕೃತಕವಾದ ಗಿಡವಲ್ಲ, ಇದು ನಿಜವಾದ ಗಿಡವೇ!" ಎಂದು ಹೇಳುತ್ತ, ಸಂತೋಷದಿಂದ ಎರಡು ಕಣ್ಣೀರು ಹಾಕಿದಳು.

ಸಖಿಯರು "ಛೆಛೆ! ನಿಜವಾದ ಗಿಡದಲ್ಲಿ ಇಂತಹ ಹೂ ಬಿಡುವುದು ಸಾಧ್ಯವೇ ಇಲ್ಲ" ಎಂದರು.

ಚಕ್ರವರ್ತಿ "ಇರಲಿ, ಇರಲಿ. ಇನ್ನೊಂದು ಪಾತ್ರೆಯಲ್ಲಿ ಏನಿದೆಯೋ ನೋಡೋಣ" ಎಂದ. ಅದರ ಒಳಗಿನಿಂದ ಕೋಗಿಲೆ ಹೊರಗೆ ಬಂತು. ಅದ್ಭುತವಾಗಿ ಹಾಡಿತು. ಏನು ಮಹಾ, ಒಂದು ಗಿಡವನ್ನು ಕಳುಹಿಸಿದನಲ್ಲ ಎಂದು ಕೋಪಗೊಳ್ಳುತ್ತಿದ್ದ ಚಕ್ರವರ್ತಿ ಅದರ ಹಾಡು ಕೇಳಿ ಸ್ವಲ್ಪ ಶಾಂತನಾದನು.

"ಅದ್ಭುತ! ಅಪೂರ್ವ! ಆಶ್ಚರ್ಯ!" ಎಂದು ಸಖಿಯರೆಲ್ಲರೂ ಅದನ್ನು ಮೆಚ್ಚಿಕೊಂಡರು.

ಅಲ್ಲಿಯೇ ಇದ್ದ ಮಂತ್ರಿ "ಆ ಹಕ್ಕಿಯ ಹಾಡನ್ನು ಕೇಳಿದರೆ, ನಮ್ಮ ಚಕ್ರವರ್ತಿನಿ ತನ್ನ ತವರುಮನೆಯಿಂದ ತಂದ ಸಂಗೀತದ ಪೆಟ್ಟಿಗೆಯ ನೆನಪು ಬರುತ್ತದೆ. ಆ ಪೆಟ್ಟಿಗೆಯ ಕೀಲು ತಿರುಗಿಸಿದರೆ, ನಿಜವಾದ ಕೋಗಿಲೆ ಹಾಡಿದ ಹಾಗೆಯೇ ಹಾಡು ಕೇಳಿಸುತ್ತಿತ್ತು" ಎಂದನು.

"ಹೌದು, ಮಂತ್ರಿ" ಎಂದು ಚಕ್ರವರ್ತಿ ಸತ್ತುಹೋಗಿದ್ದ ತನ್ನ ಹೆಂಡತಿಯನ್ನು ಜ್ಞಾಪಿಸಿಕೊಂಡು, ಮಗುವಿನ ಹಾಗೆ ಗಳಗಳ ಅಳುತ್ತಾ ಕುಳಿತನು.

ಚಕ್ರವರ್ತಿಯ ಮಗಳು "ಆ ಗಿಡ ನಿಜವಾದ ಗಿಡವೇ ಆದ ಹಾಗೆ ಇದೂ ನಿಜವಾದ ಕೋಗಿಲೆಯೇ ಅಲ್ಲ ತಾನೆ?" ಎಂದಳು.

ಆ ಗಿಡವನ್ನೂ ಕೋಗಿಲೆಯನ್ನೂ ತಂದ ಆ ಬಡರಾಜಕುಮಾರನ ದೂತ "ಹೌದು, ಇದು ನಿಜವಾದ ಹಕ್ಕಿಯೇ!" ಎಂದ.

ಆಗ ಚಕ್ರವರ್ತಿಯ ಮಗಳು "ಹಾಗಾದರೆ ಅದು ಹಾರಿಹೋಗಲಿ" ಎಂದಳು. ಬಡರಾಜಕುಮಾರನೇನಾದರೂ ತನ್ನನ್ನು ವರಿಸುವುದಕ್ಕೆ ಬಂದರೆ ಅವನ ಮುಖವನ್ನು ಕೂಡ ನೋಡುವುದಿಲ್ಲವೆಂದು ನಿಶ್ಚಯಿಸಿಕೊಂಡಳು.

ಆದರೆ ಅವಳು ನಿರಾಕರಿಸಿದ್ದರಿಂದ ರಾಜಕುಮಾರನು ಏನೂ ನಿರುತ್ಸಾಹಿಯಾಗಲಿಲ್ಲ. ಮನೆಗೆ ಹಿಂದಿರುಗಿ ಹೋಗಿ, ತನ್ನ ಮುಖ ಕಂದಾಗುವಂತೆ ಬಣ್ಣಹಾಕಿಕೊಂಡು, ಕರಿಯ ಕೂದಲು ಕೆದರಿಕೊಂಡು,

ಹರಕು ಬಟ್ಟೆ ಉಟ್ಟು ಹೊದೆದು, ಅರಮನೆಯ ಬಾಗಿಲಿಗೆ ಬಂದು, ಚಕ್ರವರ್ತಿಯನ್ನು ಕಾಣಬೇಕೆಂದು ಬಯಸಿದ.

ಒಡನೆಯೆ ಅವನನ್ನು ಒಳಗೆ ಬಿಟ್ಟರು. ಅವನು ನೆಲದ ವರೆಗೆ ಬಗ್ಗಿ, "ನಮಸ್ಕಾರ, ಚಕ್ರವರ್ತಿಗಳೇ. ನಿಮ್ಮ ಅರಮನೆಯಲ್ಲಿ ಕೆಲಸಕ್ಕೆ ಒಬ್ಬ ಆಳು ಬೇಕಾಗಿದ್ದಾನಂತೆ. ನನ್ನನ್ನು ನೇಮಿಸಿಕೊಳ್ಳುತ್ತೀರಾ?" ಎಂದು ಕೇಳಿದ.

ಚಕ್ರವರ್ತಿ "ನಿನಗೆ ಒಪ್ಪುವಂಥ ಕೆಲಸ ಯಾವುದೂ ಇದ್ದಹಾಗಿಲ್ಲ" ಎಂದು ಹೇಳುತ್ತ, ಹಾಗೆಯೇ "ತಾಳು, ತಾಳು. ನಮ್ಮ ಅರಮನೆಯಲ್ಲಿ ತುಂಬ ಹಂದಿಗಳಿವೆ. ಅವುಗಳನ್ನು ನೋಡಿಕೊಳ್ಳುವುದಕ್ಕೆ ಒಬ್ಬ ಹಂದಿ ಕುರುಬ ಬೇಕಾಗಿತ್ತು" ಎಂದನು.

ಹೀಗೆ ಆ ಬಡರಾಜಕುಮಾರನು ವೇಷ ಮರೆಸಿಕೊಂಡು ಬಂದು, ಚಕ್ರವರ್ತಿಯ ಅರಮನೆಯಲ್ಲಿ ಹಂದಿಕುರುಬನಾದನು.

ಹಂದಿಗಳ ರೊಪ್ಪಕ್ಕೆ ಹತ್ತಿರವಾಗಿ ಅವನಿಗೆ ಒಂದು ಮುರುಕಲು ಕೊಟಡಿ ಕೊಟ್ಟಿದ್ದರು. ಅವನು ಅಲ್ಲಿ ವಾಸಮಾಡುತ್ತ, ಹಂದಿಗಳನ್ನು ನೋಡಿಕೊಳ್ಳುತ್ತಿದ್ದ.

ಅವನು ಹೀಗೆ ಅರಮನೆಗೆ ಬಂದು ಸೇರಿದ ಮೊದಲನೆಯ ಸಂಜೆ ಒಂದು ವಿಚಿತ್ರವಾದ ಕೊಳಗತಪ್ಪಲೆಯನ್ನು ಮಾಡಿ ಅದರ ಅಂಚಿನ ಸುತ್ತ ಸಣ್ಣ ಸಣ್ಣ ಗಂಟೆಗಳನ್ನು ಕಟ್ಟಿದ. ಆ ತಪ್ಪಲೆಯನ್ನು ಒಲೆಯ ಮೇಲಿಟ್ಟು, ಅದರಲ್ಲಿ ನೀರು ಕುದಿಸಿದಾಗ, ಆ ಗಂಟೆಗಳು ಕಿಣಿಕಿಣಿ ಶಬ್ದಮಾಡುತ್ತ,

"ನನ್ನ ಮುದ್ದು ಮೋಹನಾ
ಸರ್ವನಾಶವಾಯಿತೋ!"

ಎಂಬ ಹಾಡು ಕೇಳಿಬರುತ್ತಿತ್ತು.

ಆ ತಪ್ಪಲೆಯಲ್ಲಿ ಇವಕ್ಕಿಂತ ಒಂದು ಹೆಚ್ಚಿನ ಚಮತ್ಕಾರವಿತ್ತು. ಅದರಲ್ಲಿ ನೀರು ಕುದಿದಾಗ ಹೊರಗೆ ಬರುವ ಹಬೆಯಲ್ಲಿ ಯಾರಾದರೂ ಬೆರಳಿಟ್ಟು, ಅನಂತರ ಆ ಬೆರಳನ್ನು ಮೂಸಿ ನೋಡಿದರೆ, ಊರಿನ ಯಾರಯಾರ ಮನೆಯಲ್ಲಿ ಏನೇನು ಅಡಿಗೆ ಎಂಬುದನ್ನು ತಿಳಿಯಬಹು

ದಾಗಿತ್ತು. ಸಹಜವೂ ಸುಂದರವೂ ಆದ ಆ ಗುಲಾಬಿಯ ಪರಿಮಳಕ್ಕಿಂತ ಈ ಅಡಿಗೆಯ ಪರಿಮಳ ನಿಜವಾಗಿಯೂ ಬೇರೆಯಲ್ಲವೆ?

ಮಾರನೆಯ ದಿವಸ ಚಕ್ರವರ್ತಿಯ ಮಗಳೂ ಅವಳ ಸಖಿಯರೂ ಆ ಹಂದಿಕುರುಬನ ಮುರುಕುಮನೆಯ ಹತ್ತಿರ ಹೋಗುತ್ತಿದ್ದಾಗ, ತಪ್ಪಲೆಯ ಕಿಣಿಕಿಣಿ ಶಬ್ದವನ್ನು ಕೇಳಿ, ಆಶ್ಚರ್ಯಪಟ್ಟರು. ಮುಂದೆ 'ನನ್ನ ಮುದ್ದು ಮೋಹನಾ' ಎಂಬುದನ್ನು ಕೇಳಿದ ಮೇಲಂತೂ ಸ್ತಬ್ಧ ರಾಗಿ ಅಲ್ಲೇ ನಿಂತರು. ಚಕ್ರವರ್ತಿಯ ಮಗಳ ಸಂತೋಷವನ್ನಂತೂ ಹೇಳ ತೀರದು. ಏಕೆಂದರೆ ಅವಳಿಗೆ ಗೊತ್ತಿದ್ದುದು ಅದೊಂದೇ ಹಾಡು. ಅದನ್ನು ಅವಳು ಯಾವಾಗಲೂ ಒಂಟಿ ಬೆರಳಿನಲ್ಲಿ ಹಾರ್ಮೋನಿಯಂ ಮೇಲೆ ನುಡಿಸುತ್ತಿದ್ದಳು.

ಅವಳು "ಇದೇನಿದು? ನನ್ನ ಹಾಡನ್ನು ಇವನು ಬಾರಿಸುತ್ತಿದ್ದಾನೆ. ಈ ಹಂದಿಕುರುಬ ತುಂಬಾ ವಿದ್ಯಾವಂತನಾಗಿರಬೇಕು. ಇವನ ಆ ಯಂತ್ರಕ್ಕೆ ಏನು ಬೆಲೆಯೆಂದು ಹೋಗಿ ಕೇಳೋಣ" ಎಂದುಕೊಂಡಳು.

ಆದರೆ ಅವಳಿಗೆ ಬದಲಾಗಿ ಅವಳ ಸಖಿಯರಲ್ಲಿ ಒಬ್ಬಳು ಹೋಗ ಬೇಕಾಯಿತು. ಅವಳು ಎಲ್ಲಿ ಕಾಲಿಗೆ ಕೊಳೆ ಮೆತ್ತಿಕೊಳ್ಳುತ್ತದೋ ಎಂದು ನಾಜೂಕಾಗಿ ಹೆಜ್ಜೆಯಿಡುತ್ತ ಬಂದು, "ಈ ಹಾಡುವ ತಪ್ಪಲೆಗೆ ಎಷ್ಟು ಬೆಲೆ?" ಎಂದಳು.

"ಚಕ್ರವರ್ತಿಯ ಮಗಳು ಹತ್ತು ಮುತ್ತು ಕೊಟ್ಟರೆ, ಈ ತಪ್ಪಲೆ ಯನ್ನು ಕೊಡುತ್ತೇನೆ" ಎಂದ, ಆ ಬಡರಾಜಕುಮಾರ.

"ಅಯ್ಯೋ ಪಾಪೀ! ಎಷ್ಟು ಧೈರ್ಯ ನಿನಗೆ?" ಎಂದಳು, ಸಖಿ.

"ಅದು ಹೊರತು ಬೇರೆ ಯಾವ ಬೆಲೆಗೂ ನಾನು ಈ ತಪ್ಪಲೆಯನ್ನು ಮಾರುವುದಿಲ್ಲ. ಇದು ಕಂಡಿತ."

ಸಖಿ ಪೆಚ್ಚುಮುಖ ಮಾಡಿಕೊಂಡು ಹಿಂದಿರುಗಿದಳು.

"ಅವನು ಏನು ಹೇಳಿದ?" ಎಂದು ಚಕ್ರವರ್ತಿಯ ಮಗಳು ಕೇಳಿದಳು.

"ಅವನು ಹೇಳಿದ್ದನ್ನು ಹೇಳಲು ದಿಗಿಲಾಗುತ್ತದೆ"

"ಹತ್ತಿರ ಬಂದು, ನನ್ನ ಕಿವಿಯಲ್ಲಿ ಹೇಳು."

ಸಖಿ ಬಂದು ಹೇಳಿದಳು. ಅದನ್ನು ಕೇಳಿ ಚಕ್ರವರ್ತಿಯ ಮಗಳ ಮುಖ ಕೆಂಪೇರಿ, "ಅಬ್ಬಾ, ಅವನ ಧೃಷ್ಟತನವೆ!" ಎಂದು ಹೊರಟಳು.

ಎರಡು ಹೆಜ್ಜೆ ಆಚೆ ಇಟ್ಟಳೊ ಇಲ್ಲವೊ, ತಪ್ಪಲೆ ಪುನಃ ಕಿಣಿಕಿಣಿ ಶಬ್ದಮಾಡುತ್ತ

"ನನ್ನ ಮುದ್ದು ಮೋಹನಾ
ಸರ್ವನಾಶವಾಯಿತೋ!"

ಎಂದು ಹಾಡತೊಡಗಿತು. ಒಡನೆಯೆ ಅವಳು ನಿಂತು, ತನ್ನ ಸಖಿಯೊಬ್ಬಳನ್ನು ಕರೆದು, "ಏನೆ! ನನಗೆ ಬದಲಾಗಿ ನನ್ನ ಸಖಿಯರಲ್ಲಿ ಯಾರಾದರೂ ಹತ್ತು ಮುತ್ತು ಕೊಟ್ಟರೆ ಆಗಬಹುದೆ ಎಂದು ಕೇಳಿಕೊಂಡು ಬಾ" ಎಂದಳು.

ಅದಕ್ಕೆ ಆ ಹಂದಿಕುರುಬ "ಚಕ್ರವರ್ತಿಯ ಮಗಳಿಂದ ಅಲ್ಲದೆ ಬೇರೆ ಯಾರಿಂದಲೂ ನಾನು ಒಲ್ಲೆ. ಬೇಡದೆ ಹೋದರೆ, ನನ್ನ ತಪ್ಪಲೆ ನನ್ನ ಹತ್ತಿರ ಇರಲಿ" ಎಂದನು.

ಚಕ್ರವರ್ತಿಯ ಮಗಳಿಗೆ "ಇದೇನು ಅನಿಷ್ಟ!" ಎನ್ನಿಸಿತು. "ಆದರೆ ಈ ವಿಚಿತ್ರವಾದ ತಪ್ಪಲೆ ಇಲ್ಲದೆ ನನಗೆ ಜೀವವೇ ನಿಲ್ಲದು. ಏನು ಮಾಡಲಿ?" ಎಂದುಕೊಂಡು, ಕೊನೆಗೆ "ಬೇರೆ ಯಾರಿಗೂ ಏನೂ ಕಾಣದ ಹಾಗೆ ನೀವು ನನ್ನ ಸಖಿಯರು ಸುತ್ತಲೂ ಮರೆಮಾಡಿ ನಿಂತುಕೊಳ್ಳುವುದಾದರೆ ನಾನು ಅವನಿಗೆ ಅವನು ಕೇಳಿದ ಬೆಲೆ ಕೊಡಲು ಒಪ್ಪುತ್ತೇನೆ" ಎಂದಳು.

ಆಗ ಆ ಸಖಿಯರೆಲ್ಲರೂ ಚಕ್ರವರ್ತಿಯ ಮಗಳ ಸುತ್ತಲೂ ಮರೆಮಾಡಿಕೊಂಡು ನಿಂತರು. ಹಂದಿಕುರುಬನು ಬಂದು ಅವಳಿಂದ ಹತ್ತು ಮುತ್ತು ಪಡೆದು, ಅವಳಿಗೆ ಆ ಹಾಡುವ ತಪ್ಪಲೆಯನ್ನು ಕೊಟ್ಟ.

ಚಕ್ರವರ್ತಿಯ ಮಗಳ ಆನಂದ ಹೇಳತೀರದು. ಆ ಇಡಿಯ ಸಂಜೆಯೆಲ್ಲ ಆ ಗಂಟೆಗಳ ಕಿಣಿಕಿಣಿಯನ್ನೂ ಆ 'ನನ್ನ ಮುದ್ದುಮೋಹನಾ' ಗಾನವನ್ನೂ ಎಷ್ಟು ಕೇಳಿದರೂ ಸಾಲದು. ಮಾರನೆಯ ದಿನವೆಲ್ಲಾ ಆ ತಪ್ಪಲೆ ಒಲೆಯ ಮೇಲಿನಿಂದ ಇಳಿಯಲೇ ಇಲ್ಲ. ಚಕ್ರವರ್ತಿಯ ಮಗಳೂ ಅವಳ ಸಖಿಯರೂ ಅದರ ಸುತ್ತಲೂ ಕುಳಿತು, ಅದರ ಒಳಗಿ

ನಿಂದ ಬರುವ ಹಜೆಗೆ ಬೆರಳು ತೋರಿ, ಮಹಾಮಂತ್ರಿಯ ಮನೆಯಿಂದ ಹಿಡಿದು ಮೋಚಿಯುವನ ಮನೆಯ ವರೆಗೂ ಊರಿನ ಒಂದೊಂದು ಮನೆಯಲ್ಲೂ ಏನೇನು ಅಡಿಗೆ ಎಂಬುದನ್ನು ತಿಳಿದರು.

ಸಖಿಯರೆಲ್ಲರೂ ಕೈ ಚಪ್ಪಾಳೆ ತಟ್ಟುತ್ತ, ಸಂತೋಷದಿಂದ ನರ್ತಿಸುತ್ತ, "ಈಹೊತ್ತು ಯಾರ ಮನೆಯಲ್ಲಿ ಹುಳಿ, ಯಾರ ಮನೆಯಲ್ಲಿ ಪಾಯಸ ಹೋಳಿಗೆ ಎಂಬುದನ್ನೆಲ್ಲಾ ನಾವು ತಿಳಿದೆವು" ಎಂದು ಹಿಗ್ಗಿದರು.

ಚಕ್ರವರ್ತಿಯ ಮಗಳು ಮಾತ್ರ "ಛೆ! ಇದನ್ನೆಲ್ಲಾ ನಾವು ಮಾತನಾಡಬಾರದು. ನಾನು ಚಕ್ರವರ್ತಿಯ ಮಗಳಲ್ಲವೆ!" ಎಂದಳು.

ಇತ್ತ ಇವರು ಹೀಗೆ ಸಂಭ್ರಮದಿಂದಿರಲು, ಅತ್ತ ಆ ಹಂದಿಕುರುಬ —ಎಂದರೆ ಅರಮನೆಯವರು ಯಾರಿಗೂ ತನ್ನ ಗುರುತು ಗೊತ್ತಾಗದಂತೆ ವೇಷ ಮರೆಸಿಕೊಂಡಿದ್ದ ಆ ಬಡರಾಜಕುಮಾರ ಸುಮ್ಮನೆ ಸೋಮಾರಿಯಾಗಿ ಕುಳಿತಿರಲಿಲ್ಲ. ಕೆಲವು ದಿನ ಕಳೆಯುವುದರೊಳಗಾಗಿ ಒಂದು ಅತಿವಿಚಿತ್ರವಾದ ಗಿಲಿಕೆಯನ್ನು ತಯಾರು ಮಾಡಿದ. ಆ ಗಿಲಿಕೆಯನ್ನು ಸುಮ್ಮನೆ ಕುಲುಕಿದರೆ ಸಾಕು, ಅದರೊಳಗಿನಿಂದ ಚಿತ್ರವಿಚಿತ್ರವಾದ ನರ್ತನದ ಹಾಡುಗಳು ಕೇಳಿಸಿಬರುತ್ತಿತ್ತು.

ಆ ವಿಚಿತ್ರವಾದ ಗಿಲಿಕೆ ಒಂದು ದಿನ ಚಕ್ರವರ್ತಿಯ ಮಗಳ ಗಮನಕ್ಕೆ ಬಂತು. ಅವಳು ಆ ಹೊಸ ಆಟದ ಸಾಮಾನಿಗೆ ಮನಸ್ಸೋತು, ಮೋಹಗೊಂಡು, ಪುನಃ ತನ್ನ ಸಖಿಯನ್ನು ಕರೆದು, "ಹೋಗಿ, ಆ ಗಿಲಿಕೆಗೆ ಏನು ಬೆಲೆ ಎಂದು ವಿಚಾರಿಸಿಕೊಂಡು ಬಾ. ಆದರೆ ಪುನಃ ಮುತ್ತಿನ ಮಾತು ಎತ್ತಬೇಡ ಎಂದು ಅವನಿಗೆ ಹೇಳು" ಎಂದಳು.

ಆ ಸಖಿ ಹಂದಿಕುರುಬನ ಹತ್ತಿರ ಹೋಗಿ, ಅವನ ಉತ್ತರವನ್ನು ತಂದು ತಿಳಿಸಿದಳು.

"ಆ ಗಿಲಿಕೆಯ ಬೆಲೆ ಒಂದು ನೂರು ಮುತ್ತುಗಳಂತೆ. ಅದನ್ನು ನೀನೇ ಕೊಡಬೇಕಂತೆ" ಎಂದಳು.

"ಎಲ್ಲೋ ಆ ಮನುಷ್ಯನಿಗೆ ಹುಚ್ಚು ಹಿಡಿದಿರಬೇಕು" ಎಂದು ಚಕ್ರವರ್ತಿಯ ಮಗಳು ಸಿಡುಕಿನಿಂದ ಮುಖ ತಿರುವಿದಳು. ಆದರೆ ನಾಲ್ಕು

ಹೆಜ್ಜೆ ನಡೆಯುವುದರೊಳಗಾಗಿ ನಿಂತು, ತನ್ನ ಸಖಿಯರಲ್ಲಿ ಒಬ್ಬಳನ್ನು ಕರೆದಳು.

"ಇಂತಹ ಕುಶಲವಾದ ಕೈಗಾರಿಕೆಗಳಿಗೆ ನಾವು ಪ್ರೋತ್ಸಾಹ ಕೊಡದಿದ್ದರೆ ಚಕ್ರವರ್ತಿಯ ಮಗಳಾಗಿ ಏನು ಪ್ರಯೋಜನ? ಈಗಲೇ ಅವನ ಹತ್ತಿರ ಹೋಗಿ, ಚಕ್ರವರ್ತಿಯ ಮಗಳು ಹತ್ತು ಮುತ್ತು ಕೊಡುತ್ತಾಳೆ, ಉಳಿದುದನ್ನು ಅವಳ ಸಖಿಯರು ಕೊಡುತ್ತಾರೆ ಎಂದು ಹೇಳಿ ಬಾ" ಎಂದಳು.

"ಅಯ್ಯಯ್ಯೋ! ಈ ತಂಟೆ ನಮಗೇಕೆ?" ಎಂದು ಆ ಸಖಿಯರೆಂದರು.

"ಓಹೋಹೋ! ಮಹಾ! ನಾನೇ ಅವನಿಗೆ ಮುತ್ತು ಕೊಡಬಹುದಂತೆ! ನಿಮಗೇನು! ನಿಮಗೆ ತಿನ್ನುವುದಕ್ಕೆ ಅನ್ನ, ಧರಿಸುವುದಕ್ಕೆ ಬಟ್ಟೆ ಮುಂತಾದ್ದನ್ನೆಲ್ಲ ನಾನು ಕೊಡುತ್ತಿದ್ದೇನೆ ಎಂಬುದನ್ನು ನೀವು ಮರೆತಹಾಗಿದೆ!" ಎಂದಳು, ಆ ಚಕ್ರವರ್ತಿಯ ಮಗಳು.

ಸಖಿಯರು ಬೇರೆ ಉಪಾಯವಿಲ್ಲದೆ ಒಪ್ಪಿಕೊಳ್ಳಬೇಕಾಯಿತು. ಅವರಲ್ಲೊಬ್ಬಳು ಹಂದಿಕುರುಬನ ಬಳಿಗೆ ಹೋಗಿ, ದಡದಡನೆ ಓಡಿ ಬಂದಳು.

"ಚಕ್ರವರ್ತಿಯ ಮಗಳೇ ನೂರು ಮುತ್ತು ಕೊಟ್ಟರೆ ಕೊಡಲಿ. ಇಲ್ಲದಿದ್ದರೆ ನನ್ನ ಗಿಲಿಕೆ ನನ್ನ ಬಳಿಯೇ ಇರಲಿ – ಎಂದು ಅವನು ಖಂಡಿತವಾಗಿ ಹೇಳಿದ" ಎಂದಳು.

ಸರಿ, ಸಖಿಯರೆಲ್ಲರೂ ಬೇಗ ಬೇಗ ಚಕ್ರವರ್ತಿಯ ಮಗಳ ಸುತ್ತಲೂ ಗುಂಡಾಗಿ ನಿಂತು, ತಮ್ಮ ವಸ್ತ್ರಗಳನ್ನು ಹರಡಿಕೊಂಡು ಮರೆಮಾಡಿದರು. ಚಕ್ರವರ್ತಿಯ ಮಗಳು ಹಂದಿಕುರುಬನಿಗೆ ಮುತ್ತು ಕೊಡುತ್ತಿದ್ದಳು.

ಆ ಸಮಯಕ್ಕೆ ಸರಿಯಾಗಿ ಚಕ್ರವರ್ತಿ ಅರಮನೆಯ ಮಾಳಿಗೆಯ ಮೇಲಿನಿಂದ ನೋಡುತ್ತಾ "ಇದೇನಿದು ಹಂದಿಗಳ ರೊಪ್ಪದ ಹತ್ತಿರ ಇಷ್ಟು ಗಲಾಟೆ?" ಎಂದುಕೊಂಡು, ತನ್ನ ಕನ್ನಡಕವನ್ನು ತೆಗೆದು ಮೂಗಿನ ಮೇಲೇರಿಸಿ, "ಓಹೋ, ಅಂತಃಪುರದ ಸಖಿಯರು ಏನೋ ಹುಚ್ಚಾಟ

ಆಡುವ ಹಾಗಿದೆ. ಹತ್ತಿರ ಹೋಗಿ, ಅದೇನೋ ನೋಡೋಣ" ಎಂದು ಕೊಂಡನು.

ಆಗ ಆ ಚಕ್ರವರ್ತಿ ತನ್ನ ಮೃದುವಾದ ಚಪ್ಪಲಿಗಳನ್ನು ಮೆಟ್ಟಿ ಕೊಂಡು, ಸ್ವಲ್ಪವೂ ಸದ್ದಾಗದ ಹಾಗೆ ತೋಟವನ್ನು ಹಾದು, ಹಂದಿಯ ರೊಪ್ಪದ ಹತ್ತಿರ ಬಂದನು. ಅಲ್ಲಿ ಸಖಿಯರೆಲ್ಲ ಮುತ್ತುಗಳನ್ನು ಎಣಿಸು ವುದರಲ್ಲೇ ಮಗ್ನರಾಗಿದ್ದುದರಿಂದ ಚಕ್ರವರ್ತಿ ಬಂದದ್ದು ಅವರಿಗೆ ಗೊತ್ತೇ ಆಗಲಿಲ್ಲ.

ಚಕ್ರವರ್ತಿ ತುದಿಗಾಲಿನ ಮೇಲೆ ನಿಂತು, ನಡೆಯುತ್ತಿದ್ದುದನ್ನು ಕಂಡು, "ಇದೇನಿದು?" ಎಂದು ಗರ್ಜಿಸಿದ. ಸಖಿಯರೆಲ್ಲ ದಾರಿ ಬಿಟ್ಟು ಹಿಮ್ಮೆಟ್ಟಿದರು. ಚಕ್ರವರ್ತಿ ಮಗಳ ಕೆನ್ನೆಗೆ ಫಳೀರೆಂದು ಒಂದು ಬಿಗಿದ. ಆ ವೇಳೆಗೆ ಅವಳು ಅರವತ್ತೆಂಟನೆಯ ಮುತ್ತು ಕೊಡುತ್ತಿದ್ದಳು.

"ಸಖಿಯರೆಲ್ಲಾ ಈ ದಿವಸವೇ ಅರಮನೆಯನ್ನು ಬಿಟ್ಟು ತೊಲಗಿ ಹೋಗಿ!" ಎಂದು ಚಕ್ರವರ್ತಿ ಗುಡುಗಿದನು.

ಚಕ್ರವರ್ತಿಯ ಮಗಳು ತನ್ನ ಗತಿ ಏನಾಗುವುದೋ ಎಂದು ಬಿಕ್ಕಿ ಬಿಕ್ಕಿ ಅಳುತ್ತ ನಿಂತುಕೊಂಡಳು. "ನೀನು ಇಂಥ ಕೆಲಸ ಮಾಡಬಹುದೆ?" ಎಂದು ಹಂದಿಕುರುಬ ತಾನೇ ಅವಳನ್ನು ಆಕ್ಷೇಪಿಸುತ್ತಿದ್ದ.

"ಅಯ್ಯೋ! ನನಗೆ ಇಷ್ಟು ಬುದ್ಧಿಯಿಲ್ಲದೆ ಹೋಯಿತಲ್ಲ! ಆ ದಿವಸ ಗುಲಾಬಿಗಿಡವನ್ನೂ ಕೋಗಿಲೆಯನ್ನೂ ಕಳುಹಿಸಿ, ನನ್ನನ್ನು ವರಿಸಲು ಬಯಸಿದ ಆ ರಾಜಕುಮಾರನನ್ನು ನಾನು ಒಪ್ಪಿಕೊಂಡಿದ್ದರೆ, ಈ ದಿನ ನನಗೆ ಈ ಅವಸ್ಥೆ ಬರುತ್ತಿರಲಿಲ್ಲ!" ಎಂದು ಚಕ್ರವರ್ತಿಯ ಮಗಳು ಗೋಳಾಡಿದಳು.

ಆಗ ಹಂದಿಕುರುಬನು ಒಂದು ಮರದ ಮರೆಗೆ ಹೋಗಿ, ತನ್ನ ಮುಖಕ್ಕೂ ಕೂದಲಿಗೂ ಹಚ್ಚಿಕೊಂಡಿದ್ದ ಬಣ್ಣವನ್ನು ತೊಳೆದು, ತನ್ನ ಹರುಕು ಬಟ್ಟೆಗಳನ್ನು ತೆಗೆದು, ತನ್ನ ರಾಜಕುಮಾರನ ಸ್ವರೂಪದಿಂದ ಸುಂದರನಾಗಿ ಚೆಲುವನ್ನು ಚೆಲ್ಲುತ್ತ ಬಂದನು. ಚಕ್ರವರ್ತಿಯ ಮಗಳು ಅವನಿಗೆ ಕೈ ಮುಗಿದಳು.

“ಮರ್ಯಾದೆಯಿಂದ ನಿನ್ನನ್ನು ವರಿಸಲು ನಾನು ಬೇಡಿದಾಗ, ನೀನು ನನ್ನನ್ನು ನಿರಾಕರಿಸಿದೆ. ಈಗ ನಾನು ಅದರಂತೆಯೇ ನಿನ್ನನ್ನು ನಿರಾಕರಿಸುತ್ತೇನೆ. ಅಂತಹ ಗುಲಾಬಿಗಿಡ, ಅಂತಹ ಕೋಗಿಲೆಗಳ ಬೆಲೆಯರಿಯದೆ ತಿರಸ್ಕಾರಮಾಡಿ, ಈ ತಪ್ಪಲೆ, ಈ ಗಿಲಿಕೆ ಇಂತಹ ಆಟದ ಸಾಮಾನುಗಳಿಗೋಸ್ಕರ ನಿಕೃಷ್ಟನಾದ ಹಂದಿಕುರುಬನಿಗೆ ನೂರಾರು ಮುತ್ತು ಕೊಡಲು ಒಪ್ಪಿದೆಯಲ್ಲ! ನಿನ್ನ ಬುದ್ಧಿಗೆ ಏನು ಕೊಟ್ಟರೂ ಸಾಲದು” ಎಂದು ಹೇಳಿ, ಆ ಬಡ ರಾಜಕುಮಾರನು ತನ್ನ ರಾಜ್ಯಕ್ಕೆ ಹಿಂದಿರುಗಿ ಹೋದನು.

ಚಕ್ರವರ್ತಿಯ ಮಗಳಾದರೋ

“ನನ್ನ ಮುದ್ದು ಮೋಹನಾ!
ಸರ್ವನಾಶವಾಯಿತೋ!”

ಎಂದು, ತನಗೆ ತಿಳಿದಿದ್ದ ಆ ಒಂದೇ ಒಂದು ಹಾಡನ್ನು ಪುನಃ ಪುನಃ ಕುರುಕಿಕೊಳ್ಳುತ್ತ ಅಲ್ಲೇ ಅಳುತ್ತ ಕುಳಿತುಬಿಟ್ಟಳು.

# ದೇವದೂತ

"ಯಾವಾಗ ಒಂದು ಒಳ್ಳೆಯ ಮಗು ಸತ್ತರೂ ದೇವರ ದೂತನೊಬ್ಬನು ಸ್ವರ್ಗದಿಂದ ಇಳಿದು ಬಂದು, ಆ ಮಗುವನ್ನು ತೋಳುಗಳಲ್ಲಿ ಎತ್ತಿಕೊಂಡು, ತನ್ನ ದೊಡ್ಡದಾದ ಬಿಳಿಯ ರೆಕ್ಕೆಗಳನ್ನು ಹರಡಿ, ಮಗು ಬದುಕಿರುವಾಗ ಅದಕ್ಕೆ ಯಾವ ಯಾವ ಸ್ಥಳಗಳು ಇಷ್ಟವಾಗಿತ್ತೋ ಆ ಸ್ಥಳಗಳ ಮೇಲೆ ಹಾದು ಹಾರಿಹೋಗುತ್ತಾನೆ. ಹಾಗೆ ಹಾರುವಾಗ ಒಂದು ಹಿಡಿಯ ತುಂಬ ಹೂವುಗಳನ್ನು ಸಂಗ್ರಹಿಸಿಕೊಂಡು, ಅವು ಭೂಮಿಯಲ್ಲಿ ವಿಕಾಸವಾಗುವುದಕ್ಕಿಂತ ವಿಶೇಷವಾಗಿ ಸ್ವರ್ಗದಲ್ಲಿ ಅರಳಲೆಂದು ಅವುಗಳನ್ನು ಭಗವಂತನ ಸನ್ನಿಧಿಗೆ ಒಯ್ಯುತ್ತಾನೆ. ಭಗವಂತನು ಆ ಪುಷ್ಪಗಳನ್ನು ತನ್ನ ಹೃದಯಕ್ಕೆ ಅಪ್ಪಿಕೊಂಡು, ಅವುಗಳಲ್ಲಿ ತನಗೆ ಅತ್ಯಂತ ಪ್ರಿಯವಾದ ಒಂದಕ್ಕೆ ಮುತ್ತು ಕೊಡುತ್ತಾನೆ; ಆಗ ಆ ಹೂವು ಮಾತನಾಡುವ ಸಾಮರ್ಥ್ಯವನ್ನು ಪಡೆದು ದೇವಗಾಯಕರ ಜೊತೆಯಲ್ಲಿ ತಾನೂ ಆನಂದಮೇಳದಲ್ಲಿ ಗಾನಮಾಡುತ್ತದೆ."

ಈ ಮಾತುಗಳನ್ನು ಒಬ್ಬಾನೊಬ್ಬ ದೇವದೂತನು ಯಾವುದೋ ಒಂದು ಮೃತಶಿಶುವನ್ನು ದೇವಲೋಕಕ್ಕೆ ಎತ್ತಿಕೊಂಡು ಹೋಗುವಾಗ ಹೇಳಿದನು; ಮಗು ಅದನ್ನು ಕನಸಿನಲ್ಲಿ ಕೇಳುತ್ತಿರುವಂತೆ ಕೇಳಿತು. ಆ ಮಗು ಬದುಕಿದ್ದಾಗ ಆಗಾಗ್ಗೆ ಆಟವಾಡುತ್ತಿದ್ದ ಅನೇಕ ಸ್ಥಳಗಳನ್ನು ಹಾಯ್ದು, ತುಂಬ ಸೊಗಸಾದ ಪುಷ್ಪಗಳಿಂದ ತುಂಬಿದ್ದ ಸುಂದರವಾದ ಅನೇಕ ಉದ್ಯಾನವನಗಳ ಮೂಲಕವಾಗಿ ಆ ದೇವದೂತನು ಆ ಮೃತಶಿಶುವನ್ನು ಎತ್ತಿಕೊಂಡು ಹೋದನು.

"ಇವುಗಳಲ್ಲಿ ಯಾವುದನ್ನು ದೇವಲೋಕಕ್ಕೆ ಎತ್ತಿಕೊಂಡು

ಹೋಗೋಣ?" ಎಂದು ದೇವದೂತನು ಕೇಳಿದನು.

ಪಕ್ಕದಲ್ಲಿಯೇ ತೆಳುವಾದ ಒಂದು ಚೆಲುವುಗುಲಾಬಿಯ ಬಳ್ಳಿಯಿತ್ತು. ಆದರೆ ಯಾವುದೋ ದುಷ್ಟವಾದ ಕೈ ಅದರ ಒಂದು ಕಡ್ಡಿಯನ್ನು ಮುರಿದು, ಅದರ ತುದಿಯಲ್ಲಿ ಅರೆಬಿರಿದ ಕೆಲವು ಗುಲಾಬಿ ಮೊಗ್ಗುಗಳು ಬಾಡಿ, ಒಣಗಿ, ನೇತಾಡುತ್ತಿದ್ದುವು.

"ಪಾಪ, ಆ ಗುಲಾಬಿಯ ಪೊದೆ ನೋಡು. ಅದನ್ನು ದೇವ ಲೋಕಕ್ಕೆ ಒಯ್ಯೋಣ. ಅದು ದೇವರ ತೋಟದಲ್ಲಿ ಅರಳಲಿ" ಎಂದು ಮಗು ಹೇಳಿತು.

ದೇವದೂತನು ಗುಲಾಬಿಪೊದೆಯನ್ನು ಎತ್ತಿಕೊಂಡನು. ಮಗುವನ್ನು ಮುತ್ತಿಟ್ಟನು. ಮಗು ಕಣ್ಣು ಅರ್ಧ ತೆರೆಯಿತು. ಆಗ ದೇವದೂತನು ಗುಲಾಬಿಯ ಜೊತೆಗೆ ಸಂಜೆಕಣಿಗಿಲೆ, ನಂದಬಟ್ಟಲು ಮೊದಲಾದ ಇನ್ನೊಂದೆರಡು ಹೂಗಳನ್ನೂ ಸಂಗ್ರಹಿಸಿಕೊಂಡನು.

"ಹೂವು ಸಾಕಷ್ಟು ಆಯಿತಲ್ಲವೆ!" ಎಂದಿತು ಮಗು. ದೇವ ದೂತನು ತಲೆದೂಗಿದನಾದರೂ ದೇವಲೋಕದ ಕಡೆಗೆ ಹಾರಲಿಲ್ಲ.

ನಡುರಾತ್ರಿಯ ಹೊತ್ತು, ನಗರವೆಲ್ಲ ನಿಶ್ಶಬ್ದವಾಗಿತ್ತು. ದೇವ ದೂತನು ಆ ಮಗುವನ್ನು ಎತ್ತಿಕೊಂಡು ಒಂದು ಸಣ್ಣ ಓಣಿಯ ಮೇಲು ಭಾಗದಲ್ಲಿ ಹಾಗೇ ಹಾರಾಡಿದನು. ಅಲ್ಲಿ ಆಗ ತಾನೆ ಒಂದು ಮನೆಯವರು ಮನೆ ಬಿಟ್ಟು ಹೋಗಿದ್ದರು. ಅಲ್ಲಿ ಎಲ್ಲಿ ನೋಡಿದರೂ ಹುಲ್ಲಿನ ಗುಪ್ಪೆ, ಬೂದಿಯ ರಾಶಿ, ಕಸದ ಗುಡ್ಡೆ. ಅಲ್ಲಲ್ಲಿ ಒಡೆದ ಹೆಂಚುಚೂರು, ಗೋಡೆಯ ಗಾರೆಪುಡಿ, ಹಳೆಯ ಬಟ್ಟೆಹರಕುಗಳು. ನೋಡುವುದಕ್ಕೆ ಅಸಹ್ಯವಾಗಿತ್ತು. ಇಂತಹ ಅವಸ್ಥೆಯ ಮಧ್ಯೆ ಒಂದು ಮುರಿದ ಹೂವಿನ ಪಾತ್ರೆ, ಅದರೊಳಗಿಂದ ಒಂದು ಮಣ್ಣಿನ ಮುದ್ದೆ ಈಚೆ ಬಿದ್ದಿತ್ತು. ಯಾವುದೋ ಕಾಡುಹೂವಿನ ಒಣಗಿದ ಬೇರು ಆ ಮಣ್ಣು ಪುಡಿಯಾಗದ ಹಾಗೆ ಅದನ್ನು ಮುದ್ದೆಯಾಗಿ ಒಟ್ಟುಗೂಡಿಸಿತ್ತು.

ಕಸದ ನಡುವೆ ಆ ಹೂಗಿಡದ ಬೇರನ್ನು ತೋರಿಸಿ, ಆ ದೇವ ದೂತನು "ಇದನ್ನು ತೆಗೆದುಕೊಂಡು ಹೋಗೋಣ. ಏಕೆ ಎಂಬುದನ್ನು ದಾರಿಯಲ್ಲಿ ಹೇಳುತ್ತೇನೆ" ಎಂದನು.

ದೇವಲೋಕಕ್ಕೆ ಹೋಗುವ ದಾರಿಯಲ್ಲಿ ದೇವದೂತನು ಈ ಕತೆ ಹೇಳಿದನು.

"ಅದೋ ಆ ಓಣಿಯಲ್ಲಿ, ತಗ್ಗಾದ ಒಂದು ನೆಲಮಾಳಿಗೆಯಲ್ಲಿ ಒಬ್ಬ ಬಡ ಕಾಯಿಲೆ ಹುಡುಗನಿದ್ದ. ಚಿಕ್ಕಂದಿನಿಂದಲೂ ಅವನಿಗೆ ಕಾಲು ಸ್ವಾಧೀನವಿರಲಿಲ್ಲ. ಮನೆಯಲ್ಲಿ ತಿರುಗಾಡಬೇಕಾದರೂ ತೆವಳಿಕೊಂಡೇ ಹೋಗುತ್ತಿದ್ದ. ಬೇಸಗೆಕಾಲದಲ್ಲಿ ಒಂದು ಅರ್ಧಗಂಟೆಯ ಹೊತ್ತು ಸೂರ್ಯನಕಿರಣ ಆ ನೆಲಮಾಳಿಗೆಗೆ ಬರುತ್ತಿತ್ತು. ಆಗ ಆ ಹುಡುಗ ಬಿಸಿಲು ಕಾಯಿಸಿಕೊಳ್ಳುತ್ತ, ಬೆಳಕಿಗೆ ಅಡ್ಡವಾಗಿ ತನ್ನ ಕೈಹಿಡಿದು, ಅಲ್ಲಿ ರಕ್ತ ನಾಳಗಳಲ್ಲಿ ರಕ್ತ ಹರಿಯುವುದನ್ನು ನೋಡುತ್ತಿದ್ದ. ಕಿರಣ ಮರೆಯಾದ ಮೇಲೆ 'ನಾನು ಬಿಸಿಲಿನಲ್ಲಿ ಸುತ್ತಿಕೊಂಡು ಬಂದೆ' ಎನ್ನುತ್ತಿದ್ದ. ಆದರೂ ಅವನಿಗೆ ಕಾಡಿನಲ್ಲಿ ಎಂತಹ ಹಸುರಿದೆಯೆಂಬುದು ತಿಳಿಯದು. ಒಂದು ದಿನ ನೆರೆಮನೆಯ ಹುಡುಗ ಒಂದು ಹಸಿರು ಕೊಂಬೆ ತಂದುಕೊಟ್ಟ. ಹುಡುಗ ಅದನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡು, 'ನಾನು ಕಾಡಿನ ಮರಗಳ ಅಡಿಯಲ್ಲಿದ್ದೇನೆ, ಸೂರ್ಯನ ಬೆಳಕಿನಲ್ಲಿದ್ದೇನೆ, ಹಕ್ಕಿಗಳು ಹಾಡುತ್ತಿವೆ' ಎಂದುಕೊಳ್ಳುತ್ತಿದ್ದ. ವಸಂತಮಾಸ ಬಂದಾಗ ಒಂದು ದಿನ ನೆರೆಯ ಹುಡುಗ ಕೆಲವು ಕಾಡುಹೂಗಳನ್ನು ತಂದುಕೊಟ್ಟ. ಅದರಲ್ಲಿ ಒಂದು ಹೂವಿಗೆ ಬೇರು ಸ್ವಲ್ಪ ಅಂಟಿಕೊಂಡಿತ್ತು. ಅದನ್ನು ಆ ಹುಡುಗ ಜೋಪಾನವಾಗಿ ಒಂದು ಕುಂಡದಲ್ಲಿ ನೆಟ್ಟು, ತನ್ನ ಹಾಸಿಗೆಯ ಹತ್ತಿರ ಕಿಟಕಿಯ ಅಂಚಿನಲ್ಲಿಟ್ಟ. ಆ ಹುಡುಗ ನೆಟ್ಟ ಅದೃಷ್ಟದಿಂದ ಆ ಹೂಗಿಡ ಬೇರೂರಿ, ಚಿಗುರಿ, ಪ್ರತಿವರ್ಷವೂ ಹೂಬಿಡುತ್ತಿತ್ತು. ಆ ಹುಡುಗನಿಗೆ ಅದೇ ದೊಡ್ಡ ತೋಟವಾಯಿತು. ಅದೇ ಅವನ ಸಕಲೈಶ್ವರ್ಯವಾಯಿತು. ಅವನು ಅದಕ್ಕೆ ನೀರುಹುಯ್ದು, ಅದನ್ನು ಪಾಲಿಸಿ, ಬೆಳಗಿನಿಂದ ಸಂಜೆಯ ವರೆಗೂ ನೆಲಮಾಳಿಗೆಗೆ ಬಂದ ಒಂದೊಂದು ಸೂರ್ಯನ ಕಿರಣವನ್ನೂ ಅದಕ್ಕೆ ಕಾಣಿಸುತ್ತಿದ್ದ. ಹೀಗಾಗಿ ಅವನ ಕನಸಿನಲ್ಲಿ ಕೂಡ ಆ ಗಿಡ ಹೂ ಬಿಟ್ಟು, ಆ ಹೂ ಅರಳಿ ಪರಿಮಳ ಚೆಲ್ಲುತ್ತಿತ್ತು. ಆ ಹೂ ಅವನ ಕಣ್ಣಿಗೆ ಹಬ್ಬ ವಾಯಿತು. ದೇವರು ಅವನನ್ನು ಕರೆದು ಕಣ್ಣುಮುಚ್ಚುವಾಗಲೂ ಅವನ ದೃಷ್ಟಿ ಆ ಹೂವಿನ ಮೇಲೆಯೇ ಇತ್ತು. ಆ ಹುಡುಗ ಈಗ ಒಂದು ವರ್ಷ

ದಿಂದ ದೇವರ ಸನ್ನಿಧಿಯಲ್ಲಿದ್ದಾನೆ. ಇಷ್ಟು ಕಾಲವೂ ಈ ಹೂಗಿಡ ಆರೈಕೆ ಮಾಡುವವರಿಲ್ಲದೆ, ಒಣಗಿ ಒಣಗಿ, ಈಗ ಮನೆಯವರು ಬಿಟ್ಟು ಹೋದ ಮೇಲೆ ಕಸದೊಡನೆ ಮೂಲೆಯ ಪಾಲಾಯಿತು. ಈ ಬಡ ಹೂವು ಇಷ್ಟು ಬಾಡಿ ಒಣಗಿಹೋಗಿದ್ದರೂ ಇದನ್ನು ನಮ್ಮ ಹೂವಿನ ಸಂಗ್ರಹಕ್ಕೆ ಸೇರಿಸಿಕೊಂಡಿದ್ದೇನೆ. ಏಕೆಂದರೆ ಯಾವ ಮಹಾರಾಣಿಯ ತೋಟದ ಹೂವೂ ಕೊಟ್ಟಿರಲಾರದಷ್ಟು ನಿಜವಾದ ಆನಂದವನ್ನು ಈ ಹೂ ಕೊಟ್ಟಿದೆ."

ಆಗ ಮಗು ಆ ದೇವದೂತನನ್ನು ಕುರಿತು "ಇದೆಲ್ಲಾ ನಿನಗೆ ಹೇಗೆ ಗೊತ್ತು?" ಎಂದು ಕೇಳಿತು.

ಅದಕ್ಕೆ ದೇವದೂತನು "ನನಗೆ ಇದು ಗೊತ್ತು. ಏಕೆಂದರೆ, ಆ ನೆಲ ಮಾಳಿಗೆಯಲ್ಲಿ ತೆವಳುತ್ತಿದ್ದ ಕಾಲಿಲ್ಲದ ಬಡ ಹುಡುಗ ನಾನೇ. ನನ್ನ ಹೂ ನನಗೆ ಚೆನ್ನಾಗಿ ಗೊತ್ತು!" ಎಂದನು.

ಆಗ ಮಗು ತನ್ನ ಕಣ್ಣುಗಳನ್ನು ತೆರೆದು ಆ ದೇವದೂತನ ಮುಖದ ಅಖಂಡ ಆನಂದವನ್ನು ಕಂಡಿತು. ಅದೇ ಕ್ಷಣದಲ್ಲೇ ಅವರಿಬ್ಬರೂ ಸಮಸ್ತ ಸುಖ ಸಂತೋಷಗಳ ಬೀಡಾದ ದೇವಸದನಕ್ಕೆ ಬಂದರು. ಅಲ್ಲಿ ಭಗವಂತನು ಆ ಮೃತ ಶಿಶುವನ್ನು ತನ್ನ ಹೃದಯಕ್ಕೆ ಅಪ್ಪಿಕೊಂಡನು. ಆ ಮಗು ತಾನೂ ರೆಕ್ಕೆ ಪಡೆದು, ತನ್ನನ್ನು ಕರೆದು ತಂದ ದೇವದೂತ ನೊಡನೆ ಕೈಹಿಡಿದು ಹಾರುವಹಾಗಾಯಿತು. ಆಗ ಭಗವಂತನು ಆ ದೇವ ದೂತನು ದೇವಲೋಕಕ್ಕೆ ತಂದ ಹೂಗಳನ್ನು ಎದೆಗೊತ್ತಿಕೊಂಡನು; ಆದರೆ ಆ ಒಣಗಿದ ಕಾಡು ಹೂವಿಗೆ ಮುತ್ತಿಟ್ಟನು. ಅದು ಒಡನೆಯೆ ಮಾತನಾಡುವ ಶಕ್ತಿಯನ್ನು ಪಡೆಯಿತು; ಭಗವಂತನ ದೇವಪೀಠವನ್ನು ಬಳಸಿದ್ದ ದೇವದೂತರ ಮೇಳದಲ್ಲಿ ತಾನೂ ಆನಂದಗಾನವನ್ನು ಹಾಡಿತು. ಆಗ ಅಲ್ಲಿದ್ದವರೆಲ್ಲರೂ, ಆ ಒಳ್ಳೆಯ ಮಗು, ಅದರ ಜೊತೆಯಲ್ಲಿ ಕಸದ ಮೂಲೆಯಿಂದ ಉದ್ಧಾರವಾಗಿ ಬಂದ ಆ ಒಣಕಲು ಕಾಡು ಹೂ, ಅದ ರಂತೆಯೇ ಇತರ ದೇವದೂತರು, ಹಾಡಲು ಧ್ವನಿಪಡೆದ ಇತರ ಹೂಗಳು ಎಲ್ಲರೂ, ಸಣ್ಣ ದೊಡ್ಡ ಎಂಬ ಭೇದಭಾವವಿಲ್ಲದೆ ಆ ಆನಂದಗಾನದಲ್ಲಿ ಭಾಗಿಗಳಾಗಿ ಸಮಾನವಾದ ಸುಖವನ್ನು ಅನುಭವಿಸಿದರು.

## ರಾಜರತ್ನಂ ಅವರ ಇತರ ಪುಸ್ತಕಗಳು



ರತ್ನನ ಪದಗಳು

ಸಕ್ಕೂಬಾ ತಾಯಿ

ಚೀನಾದೇಶದ ಗಾಂಧಿ

ನಮ್ಮ ನಗೆಗಾರರು

ಸಟಾಚಾರ

ಧರ್ಮಪದ

ಬುದ್ಧವಚನ ಪರಿಚಯ

ಮಿಲಿಂದ ಪ್ರಶ್ನೆ

Omkar Press, B-City.